KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಜನವರಿ ೭, ೨೦೧೦ (ಪುಷ್ಯ ೧೭, ಶಕ ವರ್ಷ ೧೯೩೧) | ಸಂಚಿಕೆ ೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ನಗರ ಯೋಜನಾ ವಿಭಾಗದಲ್ಲಿ ಹೆಚ್ಚುವರಿಯಾಗಿ ತಾಂತ್ರಿಕ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರ, ಪತ್ರ ಸಂಖ್ಯೆ.ಬೆಂಅಪ್ರಾ/ನಯೋಸ/3846/08–09 ದಿನಾಂಕ: 4–6–2009.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ(1) ದಿನಾಂಕ: 4–6–2009ರ ಉಲ್ಲೇಖ ಪತ್ರದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರು, ಪ್ರಾಧಿಕಾರವು 1976ರಲ್ಲಿ ಅಸ್ತಿತ್ವಕ್ಕೆ ಬಂದಿದ್ದು, ಪ್ರಾಧಿಕಾರದ ಯೋಜನಾ ಶಾಖೆಯ ಸಿಬ್ಬಂದಿಯು ಕೇವಲ 5 ಜನ ತಾಂತ್ರಿಕ ಸಿಬ್ಬಂದಿಯವರಿಂದ ಕಾರ್ಯನಿರ್ವಹಿಸುತ್ತಿರುವುದರಿಂದ, ಪ್ರಾಧಿಕಾರದ ನಗರ ಯೋಜನಾ ವಿಭಾಗದಲ್ಲಿ ತಾಂತ್ರಿಕ ಸಿಬ್ಬಂದಿಯ ಕೊರತೆಯು ಕಂಡು ಬಂದಿದ್ದು, ಪ್ರಾಧಿಕಾರದ ಯೋಜನಾ ಶಾಖೆಯನ್ನು ವಿಸ್ತರಿಸುವ ಅವಶ್ಯಕತೆ ಇರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಸರ್ಕಾರದ ಮುಖ್ಯಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 23–10–2007ರಂದು ಜರುಗಿದ ಬೆಂಗಳೂರು ಮೆಟ್ರೊಪಾಲಿಟನ್ ಲ್ಯಾಂಡ್ ಟ್ರಾನ್ಸ್‌ಪೋರ್ಟ್ ಸಭೆಯ ನಡವಳಿಯ ಹಿನ್ನೆಲೆಯಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ Traffic Engineering Cell ಮತ್ತು Transport Planning Unit ಅನ್ನು ಸ್ಥಾಪಿಸಲು ತಿಳಿಸಿದ್ದು, ಪ್ರಾಧಿಕಾರದ ನಗರ ಯೋಜನಾ ವಿಭಾಗದಲ್ಲಿ ಹಾಲಿ ಇರುವ ಸಿಬ್ಬಂದಿ ಜೊತೆಗೆ Traffic Cell ನ್ನು ತೆರೆಯುವುದು ಅವಶ್ಯಕವಾಗಿದೆ. ಎಂದು ತಿಳಿಸುತ್ತಾ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ನಗರ ಯೋಜನಾ ವಿಭಾಗದಲ್ಲಿ ಹೆಚ್ಚುವರಿ ತಾಂತ್ರಿಕ ಹುದ್ದೆಗಳನ್ನು ಹೊಸದಾಗಿ ಸೃಜಿಸುವ ಸಲುವಾಗಿ ವಿಷಯವನ್ನು ದಿನಾಂಕ: 8–5–2009ರ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ, ಚರ್ಚೆಯ ನಂತರ, ಪ್ರಾಧಿಕಾರದ ನಗರ ಯೋಜನಾ ವಿಭಾಗದಲ್ಲಿ ಹೆಚ್ಚುವರಿ ಸಿಬ್ಬಂದಿಗಳನ್ನು ಸೃಜಿಸಲು ತೀರ್ಮಾನಿಸಲಾಗಿದ್ದು, ಹೊಸದಾಗಿ ಸೃಜಿಸುವ ಸಿಬ್ಬಂದಿಗಳ ವೇತನ ಭತ್ಯೆ ಇತ್ಯಾದಿ ವೆಚ್ಚಗಳನ್ನು ಪ್ರಾಧಿಕಾರದ ಆರ್ಥಿಕ ಸಂಪನ್ಮೂಲಗಳಿಂದಲೇ ಭರಿಸಲಾಗುವುದೆಂದು ತಿಳಿಸುತ್ತಾ, ಈ ಕೆಳಕಂಡ ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಸರ್ಕಾರವನ್ನು ಕೋರಿರುತ್ತಾರೆ.

| ಕ್ರ. ಸಂ. | ಹುದ್ದೆಯ ಹೆಸರು | ಹಾಲಿ ಪ್ರಾಧಿಕಾರದ C & R ನಿಯಮ ಜಾರಿಯಲ್ಲಿರುವ ಹುದ್ದೆಗಳು | ಹೊಸದಾಗಿ ಸೃಜಿಸಬೇಕಾದ ಹುದ್ದೆಗಳು | ಹುದ್ದೆಯ ವೇತನ ಶ್ರೇಣಿ |
|---|---|---|---|---|
| 1. | Additional Director of Town Planning | | 1 | ರೂ.22125–30300 |

| ಕ್ರ. ಸಂ. | ಹುದ್ದೆಯ ಹೆಸರು | ಹಾಲಿ ಪ್ರಾಧಿಕಾರದ C & R ನಿಯಮ ಜಾರಿಯಲ್ಲಿರುವ ಹುದ್ದೆಗಳು | ಹೊಸದಾಗಿ ಸೃಜಿಸಬೇಕಾದ ಹುದ್ದೆಗಳು | ಹುದ್ದೆಯ ವೇತನ ಶ್ರೇಣಿ |
|---|---|---|---|---|
| 2. | Joint Director of Town Planning | 1 | TPM one | ರೂ.20025–28275 |
| 3 | Deputy Director of Town Planning | 2 | 2 | ರೂ.18150–26925 |
| 4. | Deputy Director (Traffic Cell) | | 1 | ರೂ.18150–26925 |
| | Asst. Director of Town Planning | 3 | ಸರ್ಕಾರದ ದಿ. 7–2–2009ರ ಪತ್ರದಂತೆ ಹೊಸದಾಗಿ ಸೃಜಿಸುವ ಪ್ರಮೇಯ ಇರುವುದಿಲ್ಲ. | |
| 5. | Town Planner | 04 | 5 | ರೂ.11400–21600 |
| 6. | Asst. Town Planner | 04 | 5 | ರೂ.8825–16000 |
| 7. | GIS | | 2 | ರೂ.8825–16000 |

ಮುಂದುವರೆದು, ಪ್ರಾಧಿಕಾರದ ವಿಷಯ ಸಂಖ್ಯೆ:98/2009ರಲ್ಲಿ ಚರ್ಚಿಸಿರುವಂತೆ RMP-2015 ನ್ನು ತಯಾರಿಸುವಾಗ ಪ್ರಾಧಿಕಾರದ ನಗರ ಯೋಜನಾ ವಿಭಾಗದಲ್ಲಿನ ತಾಂತ್ರಿಕ ಸಿಬ್ಬಂದಿ ಕೊರತೆಯಿಂದ French Consultancy ಇವರಿಗೆ ಈ ಕೆಲಸವನ್ನು ಗುತ್ತಿಗೆ ನೀಡಲಾಗಿತ್ತು. ಪ್ರಸ್ತುತ ಬೆಂಗಳೂರು ಮಹಾನಗರವು ಸಾಕಷ್ಟು ಬೆಳೆದಿದ್ದು, ಅದರಂತೆ ನಗರದ ಬೇಡಿಕೆಗಳು ಅಧಿಕವಾಗಿರುವುದರಿಂದ ಇದಕ್ಕೆ ಅನುಗುಣವಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ನಗರ ಯೋಜನಾ ವಿಭಾಗದ ಸಿಬ್ಬಂದಿ ಅವಶ್ಯಕತೆಯು ಸಹ ಬೇಕಾಗಿರುತ್ತದೆ. ಪ್ರಸ್ತುತ ತಾಂತ್ರಿಕ ಸಿಬ್ಬಂದಿಯ ಕೊರತೆಯಿಂದಾಗಿ ಪ್ರಾಧಿಕಾರದಲ್ಲಿ ದೈನಂದಿನ ಕಾರ್ಯವನ್ನು ನಿಗಧಿತ ಸಮಯದಲ್ಲಿ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ ಎಂದು ತಿಳಿಸುತ್ತಾ ಪ್ರಸ್ತುತ ಪ್ರಾಧಿಕಾರವು ಸೃಜಿಸಲು ಕೋರಿರುವ ನಗರ ಯೋಜನಾ ಸಹಾಯಕ ನಿರ್ದೇಶಕರ ಹುದ್ದೆಗಳಿಗೆ ಈಗಾಗಲೇ ಸರ್ಕಾರವು ದಿನಾಂಕ: 7–2–2009ರ ಪತ್ರದಲ್ಲಿ ಪ್ರಾಧಿಕಾರದ ಅಭಿಯಂತರ ವಿಭಾಗದಿಂದ ಎರಡು ಸಹಾಯಕ ಕಾರ್ಯಪಾಲಕ ಅಭಿಯಂತರರ ಹುದ್ದೆಯನ್ನು ಸಹಾಯಕ ನಗರ ಯೋಜನಾ ನಿರ್ದೇಶಕರ ವೃಂದಕ್ಕೆ ಬದಲಾವಣೆ ಮಾಡಿಕೊಳ್ಳಲು ಅನುಮೋದನೆ ನೀಡಿರುವುದರಿಂದ, ಹೀಗಾಗಿ ಹೆಚ್ಚುವರಿಯಾಗಿ ಸಹಾಯಕ ನಗರ ಯೋಜನಾ ನಿರ್ದೇಶಕರ ಹುದ್ದೆಯನ್ನು ಸೃಷ್ಟಿಸುವ ಅಗತ್ಯವಿರುವುದಿಲ್ಲವೆಂದು ಆಯುಕ್ತರು ಪ್ರಸ್ತಾವನೆಯಲ್ಲಿ ವಿವರಿಸಿರುತ್ತಾರೆ. ಪ್ರಾಧಿಕಾರದ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 107 ಬೆಂಆಸೇ 2009, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ನಗರ ಯೋಜನಾ ವಿಭಾಗಕ್ಕೆ ಹೆಚ್ಚುವರಿಯಾಗಿ ಈ ಕೆಳಕಂಡ 17 ತಾಂತ್ರಿಕ ಹುದ್ದೆಗಳನ್ನು ಸೃಜಿಸುವ ಹಾಗೂ ಅದರಂತೆ ಪ್ರಾಧಿಕಾರದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ತಿದ್ದುಪಡಿ ಮಾಡಿಕೊಳ್ಳಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು | ಹೊಸದಾಗಿ ಸೃಜಿಸಬೇಕಾದ ಹುದ್ದೆ ಮತ್ತು ವೇತನ ಶ್ರೇಣಿ | ಷರಾ | ಅರ್ಹತೆ |
|---|---|---|---|---|
| 1. | Town Planning Member | ರೂ. 22125–30300 | TPM post is Upgreded on Par with Addl. Director of Town Planning. | Deputation From the Department of Town Planning |
| 2. | Joint Director of Town Planning | Two ರೂ. 20025–28275 | One Post by deputation from DTP & one Post by Promotion from the Cadre of DDTP, BDA. | **For Promotion:** Must have put in not less than five years of service as Deputy Director in BDA if not available, an officer who has put in not less than 3 years of Service as D.D |

| ಕ್ರ. ಸಂ. | ಹುದ್ದೆಯ ಹೆಸರು | ಹೊಸದಾಗಿ ಸೃಜಿಸಬೇಕಾದ ಹುದ್ದೆ ಮತ್ತು ವೇತನ ಶ್ರೇಣಿ | ಷರಾ | ಅರ್ಹತೆ |
|---|---|---|---|---|
| 3 | Deputy Director of Town Planning | Two ರೂ. 18150–26925 | One Post by deputation from DTP & one Post by Promotion from the Cadre of ADTP, BDA | As per the Existing C & R Rules. |
| 4. | Deputy Director (Traffic Cell) | Two ರೂ. 18150–26925 | Post to be newly created. Specialised in Traffic & Transportation Planning (Either by deputation or by direct recruitment) | Qualification as prescribed in D.T.P. C & R Rules. |
| 5. | Town Planner | ರೂ. Five 11400–21600 | 50% by direct recruitment and 50% by deputation from DTP | - |
| 6 | Asst. Town Planner | Five ರೂ. 8825–16000 | 50% by direct recruitment and 50% by deputation from DTP Office. | As per the Existing C & R Rules. |
| 7. | GIS | Two ರೂ. 8825–16000 | Two Programmer posts to be newly created specialised in GIS with supporting staff. | As per Existing C & R Rules |
| | **ಒಟ್ಟು** | **17** | | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ.ಎಫ್.ಡಿ 469 ವೆಚ್ಚ–9/09, ದಿನಾಂಕ: 7–8–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2318

**ಎಂ.ಎಸ್. ಪ್ರೇಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಕೆ.ವಿ. ವೆಂಕಟೇಶುಡು, ಹಿಂದಿನ ತಹಶೀಲ್ದಾರ್, ನಾಗಮಂಗಲ ತಾಲ್ಲೂಕು, ಹಾಲಿ ನಿವೃತ್ತರು ಹಾಗೂ ಶ್ರೀ ವಿ. ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು, ತಾಲ್ಲೂಕು ಕಛೇರಿ, ನಾಗಮಂಗಲ, ಹಾಲಿ ನಿವೃತ್ತರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ದಂಡನೆ ವಿಧಿಸುವ ಬಗ್ಗೆ.

ಓದಲಾಗಿದೆ:
1) ಮಂಡ್ಯ ಜಿಲ್ಲಾಧಿಕಾರಿಗಳು ಇವರ ಪತ್ರ ಸಂ: ಸಿಬ್ಬಂಧಿ (2): 62:2000–01, ದಿನಾಂಕ:10–12–2003
2) ದಿನಾಂಕ: 24/30–09–2003ರ ತಿಳುವಳಿಕೆ ಪತ್ರ ಸಂ:ಕಂಇ 36 ಎಡಿಇ 03.
3) ಶ್ರೀ ಕೆ.ವಿ.ವೆಂಕಟೇಶುಡು, ನಿವೃತ್ತ ತಹಶೀಲ್ದಾರ್‌ರವರ ದಿನಾಂಕ: 04–03–2004ರ ಪತ್ರ.
4) ಶ್ರೀ ವಿ.ಕೆಂಪಯ್ಯ, ನಿವೃತ್ತ ರಾಜಸ್ವ ನಿರೀಕ್ಷಕರು ಇವರ ದಿನಾಂಕ: 14–02–2004ರ ಲಿಖಿತ ಸಮಜಾಯಿಷಿ
5) ಶ್ರೀ ಕೆ.ಗೋಪಾಲಕೃಷ್ಣ, ಗ್ರಾಮಲೆಕ್ಕಿಗರು ಇವರ ದಿನಾಂಕ: 10–11–2003ರ ಲಿಖಿತ ಸಮಜಾಯಿಷಿ.

6) ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2003, ದಿನಾಂಕ:14–06–2004.
7) ವಿಚಾರಣಾಧಿಕಾರಿಗಳ ವರದಿ ದಿನಾಂಕ: 18–05–2005
8) ಎರಡನೇ ಕಾರಣ ಕೇಳುವ ನೋಟಿಸು ದಿನಾಂಕ: 06–09–2005.
9) ಶ್ರೀ ಕೆ.ವಿ.ವೆಂಕಟೇಶುಡು, ನಿವೃತ್ತ ತಹಶೀಲ್ದಾರ್ ಹಾಗೂ ಶ್ರೀ ವಿ.ಕೆಂಪಯ್ಯ, ನಿವೃತ್ತ ರಾಜಸ್ವ ನಿರೀಕ್ಷಕರು, ಇವರುಗಳ ಲಿಖಿತ ಸಮಜಾಯಿಷಿ, ದಿನಾಂಕ:20–10–2005, 10–10–2005.
10) ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2003, ದಿನಾಂಕ: 27–01–2009
11) ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂ: ಪಿಎಸ್‌ಸಿ 66 ಸಿಎನ್‌ಎಸ್ 2006, ದಿನಾಂಕ: 23–07–2009

**ಪ್ರಸ್ತಾವನೆ:**

ಶ್ರೀ ಕೆ.ವಿ. ವೆಂಕಟೇಶುಡು, ನಿವೃತ್ತ ತಹಶೀಲ್ದಾರ್, ಶ್ರೀ ವಿ.ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು, ತಾಲ್ಲೂಕು ಕಛೇರಿ, ನಾಗಮಂಗಲ, (ಹಾಲಿ ನಿವೃತ್ತರು) ಹಾಗು ಶ್ರೀ ಗೋಪಾಲಕೃಷ್ಣ, ಗ್ರಾಮಲೆಕ್ಕಿಗರು ಇವರುಗಳು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸದರಿ ತಾಲ್ಲೂಕಿನ ಗದ್ದೇಭೂವನಹಳ್ಳಿ ಗ್ರಾಮದ ಸ.ನಂ.109ರಲ್ಲಿ ಮೂಲ ದಾಖಲಾತಿಗಳ ಪ್ರಕಾರ ಸರ್ಕಾರಿ ಬೀಳು ಆಗಿದ್ದು, ಸದರಿ ನಿವೃತ್ತ ಅಧಿಕಾರಿಯು ಶ್ರೀಮತಿ ಪುಟ್ಟಬಸಮ್ಮ ಕೋಂ ಹುಚ್ಚಯ್ಯ ಎಂಬುವವರಿಗೆ ಆದೇಶ ಸಂ: ಆರ್‌ಕೆ ಬೀಳು: ಸಿಆರ್:13:98–99, ದಿನಾಂಕ: 24–07–2000ರಲ್ಲಿ ಈ ಜಮೀನನ್ನು ಬೀಳು ರೆಸ್ಟೋರ್ ಮಾಡಿ ಅಕ್ರಮವಾಗಿ ಹಕ್ಕು ಪತ್ರವನ್ನು ನೀಡಿ ಕರ್ತವ್ಯಲೋಪ ಎಸಗಿರುವುದರಿಂದ ಸದರಿ ಅಧಿಕಾರಿ/ನೌಕರರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರ.ಸಂ(1)ರಲ್ಲಿ ಓದಲಾದ ಪತ್ರದಲ್ಲಿ ಮಂಡ್ಯ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

ಅದರಂತೆ, ಆಪಾದಿತ ಅಧಿಕಾರಿ/ ನೌಕರರಿಗೆ ಮೇಲೆ ಓದಲಾದ ಕ್ರ.ಸಂ.(2)ರ ದಿನಾಂಕ: 24/30–09–2003ರಲ್ಲಿ ಕಾರಣ ಕೇಳುವ ನೋಟಿಸ್ ಜಾರಿ ಮಾಡಿ ಅವರುಗಳಿಂದ ಲಿಖಿತ ಹೇಳಿಕೆ ಪಡೆದು ಪರಿಶೀಲಿಸಿ, ಹೇಳಿಕೆ ತೃಪ್ತಿಕರವಾಗಿರದ ಕಾರಣ, ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು, ಸರ್ಕಾರವು ಮೇಲೆ ಓದಲಾದ ಕ್ರ.ಸಂ:(6)ರ ದಿನಾಂಕ:14–06–2004 ರಲ್ಲಿ ಈ ಕೆಳಕಂಡ ಆಪಾದಿತ ಅಧಿಕಾರಿ/ ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 13ರಡಿ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

1) ಶ್ರೀ ಕೆ.ವಿ.ವೆಂಕಟೇಶುಡು, ನಿವೃತ್ತ ತಹಶೀಲ್ದಾರ್
2) ಶ್ರೀ ವಿ.ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು, ತಾಲ್ಲೂಕು ಕಚೇರಿ, ನಾಗಮಂಗಲ, (ಹಾಲಿ ನಿವೃತ್ತರು) ಹಾಗೂ
3) ಶ್ರೀ ಗೋಪಾಲಕೃಷ್ಣ, ಗ್ರಾಮಲೆಕ್ಕಿಗರು

ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರ.ಸಂ(7)ರ ದಿನಾಂಕ: 18–05–2005ರಲ್ಲಿ ಈ ಪ್ರಕರಣದ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ, ಈ ಕೆಳಕಂಡ ಇಬ್ಬರು ಅಧಿಕಾರಿ/ ನೌಕರರ ವಿರುದ್ಧ ಮಾಡಲಾದ ಆಪಾದನೆಗಳು ಸಾಬೀತಾಗಿವೆ ಎಂದು ವರದಿ ಮಾಡಿರುತ್ತಾರೆ.

1) ಶ್ರೀ ಕೆ.ವಿ.ವೆಂಕಟೇಶುಡು, ನಿವೃತ್ತ ತಹಶೀಲ್ದಾರ್
2) ಶ್ರೀ ವಿ.ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು, ತಾಲ್ಲೂಕು ಕಚೇರಿ, ನಾಗಮಂಗಲ, (ಹಾಲಿ ನಿವೃತ್ತರು) ಹಾಗೂ
3) ಶ್ರೀ ಕೆ. ಗೋಪಾಲಕೃಷ್ಣ, ಗ್ರಾಮಲೆಕ್ಕಿಗರು (ಪ್ರಸ್ತುತ ಗ್ರಾಮಲೆಕ್ಕಿಗ, ಮೊದೂರು ವೃತ್ತ, ಭೂಕಿನಕೆರೆ ಹೋಬಳಿ, ಕೆ.ಆರ್.ಪೇಟೆ ತಾಲ್ಲೂಕು) ಇವರ ವಿರುದ್ಧ ಹೂಡಲಾಗಿರುವ ಆಪಾದನೆಗಳು ಸಾಬೀತಾಗಿಲ್ಲವೆಂದು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ.

ವಿಚಾರಣಾ ವರದಿಯಲ್ಲಿ ಕ್ರ.ಸಂ(1) ಮತ್ತು (2) ಅಧಿಕಾರಿ/ ನೌಕರರ ವಿರುದ್ಧ ಆರೋಪ ಸಾಬೀತಾಗಿದ್ದರಿಂದ ಸದರಿಯವರುಗಳಿಗೆ ಮೇಲೆ ಓದಲಾದ ಕ್ರ.ಸಂ(8) ದಿನಾಂಕ: 06–09–2005ರಲ್ಲಿ ಎರಡನೇ ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಲಾಗಿರುತ್ತದೆ. ಈ ನೋಟಿಸಿಗೆ ಮೇಲೆ ಓದಲಾದ ಕ್ರ.ಸಂ.(9) ದಿನಾಂಕ: 20–10–2005ರಲ್ಲಿ ಹಾಗೂ ದಿನಾಂಕ:10–10–2005ರಲ್ಲಿ ಕ್ರಮವಾಗಿ ಶ್ರೀ ಕೆ.ವಿ.ವೆಂಕಟೇಶುಡು, ನಿವೃತ್ತ ತಹಶೀಲ್ದಾರ್ ಹಾಗೂ ಶ್ರೀ ವಿ.ಕೆಂಪಯ್ಯ, ಹಿಂದಿನ ನಿವೃತ್ತ ರಾಜಸ್ವ ನಿರೀಕ್ಷಕರು, ಲಿಖಿತ ಸಮಜಾಯಿಷಿಗಳನ್ನು ಸಲ್ಲಿಸುತ್ತಾ ವಿಚಾರಣಾ ವರದಿಯನ್ನು ಒಪ್ಪಿಕೊಳ್ಳದೇ ತಮ್ಮನ್ನು ಈ ಪ್ರಕರಣದಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ. ಸರ್ಕಾರವು ಶ್ರೀಯುತರುಗಳು ಸಲ್ಲಿಸಿದ್ದ ಲಿಖಿತ ಸಮಜಾಯಿಷಿಗಳನ್ನು ಒಪ್ಪಿಕೊಳ್ಳಲು ಬರುವುದಿಲ್ಲವೆಂದು ತೀರ್ಮಾನಿಸಿ ಅವರುಗಳ ವಿರುದ್ಧ ಕೆಸಿಎಸ್‌ಆರ್ ನಿಯಮ 214ರಡಿಯಲ್ಲಿ ದಂಡನೆಯನ್ನು ವಿಧಿಸಲು ನಿರ್ಧರಿಸಿ, ಅದರಂತೆ ಲೋಕಸೇವಾ ಆಯೋಗದ ಸಹಮತಿಯನ್ನು ಸರ್ಕಾರದ ದಿನಾಂಕ: 23–06–2006ರ ಪತ್ರದಲ್ಲಿ ಕೋರಲಾಗಿತ್ತು. ಈ ಮಧ್ಯೆ ವಿಚಾರಣಾ ವರದಿಯಲ್ಲಿ ಶ್ರೀ ಕೆ. ಗೋಪಾಲಕೃಷ್ಣ,

ಗ್ರಾಮಲೆಕ್ಕಿಗರು ಇವರ ವಿರುದ್ಧ ಆರೋಪ ಸಾಬೀತಾಗಿಲ್ಲದ ಕಾರಣ, ಮೇಲೆ ಓದಲಾದ ಕ್ರ.ಸಂ.(10) ರ ದಿನಾಂಕ:27–01–2009ರ ಆದೇಶದಲ್ಲಿ ಸದರಿಯವರನ್ನು ದೋಷಮುಕ್ತಗೊಳಿಸಿ ಆದೇಶಿಸಲಾಗಿರುತ್ತದೆ. ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರು ಮೇಲೆ ಓದಲಾದ ಕ್ರ.ಸಂ.(11) ದಿನಾಂಕ: 23–07–2009ರಲ್ಲಿ ಸರ್ಕಾರವು ಉದ್ದೇಶಿಸಿರುವ ಶ್ರೀ ಕೆ.ವಿ.ವೆಂಕಟೇಶುಡು, ನಿವೃತ್ತ ತಹಶೀಲ್ದಾರ್ ಇವರಿಗೆ ಮಾಸಿಕ ವಿಶ್ರಾಂತಿ ವೇತನದಲ್ಲಿ ರೂ.500/–ಗಳನ್ನು 3 ವರ್ಷದ ಅವಧಿಗೆ ಕಡಿತಗೊಳಿಸುವ ಹಾಗೂ ಶ್ರೀ ವಿ. ಕೆಂಪಯ್ಯ, ನಿವೃತ್ತ ರಾಜಸ್ವ ನಿರೀಕ್ಷಕರು ಇವರ ಮಾಸಿಕ ವಿಶ್ರಾಂತಿ ವೇತನದಲ್ಲಿ ರೂ.300/–ಗಳನ್ನು 3 ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆ ವಿಧಿಸಲು ಸಹಮತಿ ನೀಡಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2003, ಬೆಂಗಳೂರು, ದಿನಾಂಕ: 26ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಒಪ್ಪಿ, ಸರ್ಕಾರವು ಆರೋಪಿತ ಅಧಿಕಾರಿ/ ನೌಕರರಾದ ಶ್ರೀ ಕೆ.ವಿ.ವೆಂಕಟೇಶುಡು, ನಿವೃತ್ತ ತಹಶೀಲ್ದಾರ್ ಹಾಗೂ ಶ್ರೀ ವಿ. ಕೆಂಪಯ್ಯ, ನಿವೃತ್ತ ರಾಜಸ್ವ ನಿರೀಕ್ಷಕರು ಇವರುಗಳ ವಿರುದ್ಧ ಆರೋಪಗಳು ಸಾಬೀತಾಗಿದ್ದರಿಂದ ಸದರಿಯವರುಗಳಿಗೆ ಕೆಸಿಎಸ್‌ಆರ್ ನಿಯಮ 214ರಡಿಯಲ್ಲಿ ಈ ಕೆಳಕಂಡ ದಂಡನೆಯನ್ನು ವಿಧಿಸಿ ಆದೇಶಿಸಿದೆ.

1) ಶ್ರೀ ಕೆ.ವಿ.ವೆಂಕಟೇಶುಡು, ನಿವೃತ್ತ ತಹಶೀಲ್ದಾರ್, ನಾಗಮಂಗಲ ತಾಲ್ಲೂಕು, ಪ್ರಸ್ತುತ ನಿವೃತ್ತ ತಹಶೀಲ್ದಾರ್ ಇವರ ಮಾಸಿಕ ವಿಶ್ರಾಂತಿ ವೇತನದಲ್ಲಿ ರೂ.500/– ಗಳನ್ನು 3 ವರ್ಷದ ಅವಧಿಗೆ ಕಡಿತ ಮಾಡುವುದು.

2) ಶ್ರೀ ವಿ.ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು, ನಾಗಮಂಗಲ ತಾಲ್ಲೂಕು, ಪ್ರಸ್ತುತ ನಿವೃತ್ತ ರಾಜಸ್ವ ನಿರೀಕ್ಷಕರು ಇವರ ಮಾಸಿಕ ವಿಶ್ರಾಂತಿ ವೇತನದಲ್ಲಿ ರೂ.300/–ಗಳನ್ನು 3 ವರ್ಷದ ಅವಧಿಗೆ ಕಡಿತ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2508 **ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಜಿ.ಆರ್.ನಿಕ್ಕಂ ಪಿ.ಎಸ್.ಐ (ಕಾ.ಸು) ಬಸವೇಶ್ವರ ಪೊಲೀಸ್ ಠಾಣೆ, ನಿಪ್ಪಾಣಿ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ/2ಎ/ಪಿಆರ್88/08(ಅ.ಪು.ಸಂ:868/08) ದಿ:08–09–08
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/53/ಉವ/2009 ದಿನಾಂಕ: 17–12–2008
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:16–03–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಪತ್ರ ಸಂಖ್ಯೆ: ಅಫೀಲು (2)3/09–10 ದಿನಾಂಕ: 08–06–2009

**ಪ್ರಸ್ತಾವನೆ:**

ಶ್ರೀ ಜಿ.ಆರ್.ನಿಕ್ಕಂ ಪಿ.ಎಸ್.ಐ. ಬಸವೇಶ್ವರ ಪೋಲಿಸ್ ಠಾಣೆ, ನಿಪ್ಪಾಣಿ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ದುರ್ನಡತೆ ಹಾಗೂ ನಿರ್ಲಕ್ಷತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಾಮವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

> "ಆಪಾದಿತ ಪೊಲೀಸ್ ಅಧಿಕಾರಿಯಾದ ನೀವು ಶ್ರೀ ರಮೇಶ ಹಿಂದೂರಾವ್ ಜಾಧವ ಸಾ:ಚಿಕ್ಕಿಲವಾಳ ಮತ್ತು ಅವರ ಸ್ನೇಹಿತ ಭಾರತ. ಶಂ.ಸಟಾಲೆ ಇವರು ಕೂಡಿಕೊಂಡು ಶ್ರೀಮತಿ ಸುಭದ್ರಾ ಐಹೊಳೆ (ಮಾಂಗ) ಇವರ ಜಮೀನಿನ ತಕರಾರಿನ ಬಗ್ಗೆ ಸಲಹೆಗಳನ್ನು ಕೇಳುವ ಕುರಿತು ದಿನಾಂಕ: 07–07–08ರಂದು ಠಾಣೆಗೆ ಬಂದಾಗ ಅವರೊಂದಿಗೆ ಸೌಜನ್ಯದಿಂದ ನಡೆದುಕೊಳ್ಳದೇ ಅವರಿಗೆ ಅವಾಚ್ಯ ಶಬ್ದಗಳಿಂದ ಬೈದು ಅವರ ಭಾವಚಿತ್ರ ತೆಗೆದು ಒಂದು ಹಾಳೆಯ ಮೇಲೆ ಅರ್ಜಿದಾರರ ಮತ್ತು ಕುಟುಂಬ ಸದಸ್ಯರ ಹೆಸರು ಬರೆದುಕೊಂಡು ಒತ್ತಾಯ ಪೂರ್ವಕವಾಗಿ ಸಹಿ ಪಡೆದುಕೊಂಡು ಕೇಸು ದಾಖಲಿಸುತ್ತೇನೆ ಅಂತಾ ಅವರಿಗೆ ಹೆದರಿಸಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಹಾಗೂ ನಿರ್ಲಕ್ಷತೆಯನ್ನು ಪ್ರದರ್ಶಿಸಿರುವಿರಿ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 08–09–08ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:17–12–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ68 ಪೊಸಿಇ 2009 ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಆರ್.ನಿಕ್ಕಂ ಪಿ.ಎಸ್.ಐ. ಬಸವೇಶ್ವರ ಪೊಲೀಸ್ ಠಾಣೆ, ನಿಪ್ಪಾಣಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2509

**ಟಿ.ಎಸ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಕಾರ್ಮಿಕ ಸಚಿವಾಲಯ**

**ವಿಷಯ:** ಡಾ:ಎಲ್.ಗೋವಿಂದನಾಯಕ್ ಹಾಗೂ ಶ್ರೀ ಮಹಮದ್ ಅಜೀಮುದ್ದೀನ್, ದ್ವಿತೀಯ ದರ್ಜೆ ಸಹಾಯಕರು ಇವರ ಜಂಟಿ ಇಲಾಖಾ ವಿಚಾರಣೆಯ ಬಗ್ಗೆ.

**ಓದಲಾಗಿದೆ:**
1) ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ರವರ ಪತ್ರ ಸಂಖ್ಯೆ. ದೂರು/18/94–95, ದಿನಾಂಕ: 20–12–1999
2) ಸರ್ಕಾರದ ನೋಟೀಸ್ ಸಂಖ್ಯೆ.ಕಾಇ 65 ಎಲ್ಎಸ್ಐ 2000, ದಿನಾಂಕ:22–08–2000.
3) ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ಇವರ ಪತ್ರ ಸಂಖ್ಯೆ: ESIS/EV/18/94-95 ದಿನಾಂಕ: 15–03–2004.
4) ಸರ್ಕಾರದ ಆದೇಶ ಸಂಖ್ಯೆ.ಕಾಇ 65 ಎಲ್ಎಸ್ಐ 2000, ದಿನಾಂಕ:13–08–2004.
5) ಸರ್ಕಾರದ ಆದೇಶ ಸಂಖ್ಯೆ.ಕಾಇ 65 ಎಲ್ಎಸ್ಐ 2000, ದಿನಾಂಕ:10–08–2005.
6) ದಿನಾಂಕ:05–06–2006ರಂದು ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾಧಿಕಾರಿಗಳ ವಿಚಾರಣಾ ವರದಿ.
7) 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ.ಕಾಇ 65 ಎಲ್ಎಸ್ಐ 2000, ದಿನಾಂಕ:14–08–2006 ಮತ್ತು 08–01–2008
8) ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳುರವರ ಪತ್ರ ಸಂಖ್ಯೆ.ESIS/EV/18/94-95 ದಿ:24–08–2009.

**ಪ್ರಸ್ತಾವನೆ:**

ನಿರ್ದೇಶಕರು, ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇವರು ಮೇಲೆ ಓದಲಾದ (1) ರ ದಿನಾಂಕ:20–12–1999ರ ಪತ್ರದಲ್ಲಿ ಕಾರಾವಿ ಚಿಕಿತ್ಸಾಲಯ, ವಾಡಿ ಗುಲ್ಬರ್ಗಾ ಇಲ್ಲಿ ಜನವರಿ 1991 ರಿಂದ ಫೆಬ್ರವರಿ 1991 ರವರೆಗಿನ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸುಮಾರು ರೂ.1,10,440–00ಗಳ ಸರ್ಕಾರಿ ಹಣ ದುರುಪಯೋಗವಾಗಿರುವುದಕ್ಕೆ ಸಂಬಂಧಿಸಿದಂತೆ ಡಾ:ಎಲ್.ಗೋವಿಂದನಾಯಕ್ ವಿಮಾ ವೈದ್ಯಾಧಿಕಾರಿ ಹಾಗೂ ಶ್ರೀ ಅಜಿಮುದ್ದೀನ್, ದ್ವಿತೀಯ ದರ್ಜೆ ಸಹಾಯಕ ಇವರ ವಿರುದ್ಧ ಜಂಟೀ ಇಲಾಖಾ ವಿಚಾರಣೆ ನಡೆಸುವಂತೆ ದೋಷಾರೋಪಣಾ ಪಟ್ಟಿಯನ್ನು ರೂಪಿಸಿ ಕಳುಹಿಸಿದ್ದರು. ಡಾ:ಎಲ್.ಗೋವಿಂದನಾಯಕ್ ವಿಮಾ ವೈದ್ಯಾಧಿಕಾರಿ ಹಾಗೂ

ಶ್ರೀ ಮಹಮದ್ ಅಜೀಮುದ್ದೀನ್, ದ್ವಿತೀಯ ದರ್ಜೆ ಸಹಾಯಕರು ಇವರ ಆರೋಪಗಳಿಗೆ ಸಂಬಂಧಿಸಿದಂತೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸುವ ಸಲುವಾಗಿ ಮೇಲೆ (2)ರಲ್ಲಿ ಓದಲಾದ ದಿನಾಂಕ:22–08–2000ದ ಷೋಕಾಸ್ ನೋಟಿಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ನೋಂದಾಯಿತ ಅಂಚೆ ಸ್ವೀಕೃತಿ ಮೂಲಕ ಜಾರಿ ಮಾಡಿ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ನೋಟಿಸ್ ತಲುಪಿದ 15 ದಿವಸದೊಳಗಾಗಿ ಲಿಖಿತ ಮೂಲಕ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಡಾ:ಎಲ್.ಗೋವಿಂದನಾಯಕ್, ಆಡಳಿತ ವಿಮಾ ವೈದ್ಯಾಧಿಕಾರಿ ಇವರು ತಮ್ಮ ರಕ್ಷಣಾ ಹೇಳಿಕೆಯಲ್ಲಿ 1991ರ ಜನವರಿಯಿಂದ 1993ರ ಫೆಬ್ರವರಿವರೆಗಿನ ಬಿಲ್ಲುಗಳಿಗೆ ಆಗಿನ ದ್ವಿತೀಯ ದರ್ಜೆ ಸಹಾಯಕರು ತಮ್ಮ ಖೋಟಾ ಸಹಿ ಮಾಡಿ ಬಿಲ್ಲುಗಳ ಮೊತ್ತವನ್ನು ಡ್ರಾ ಮಾಡಿರುವುದಾಗಿ ಒಬ್ಬ ಬಟವಾಡೆ ಅಧಿಕಾರಿಯಾಗಿ ಹೇಳಿಕೆ ನೀಡಿರುವುದು ಸಮಂಜಸವಾಗಿರುವುದಿಲ್ಲವೆಂದೂ ಸದರಿ ಕೃತ್ಯಕ್ಕೆ ವೇತನ ಬಟವಾಡೆ ಅಧಿಕಾರಿಗಳೂ ಸಹ ಜವಾಬ್ದಾರರಾಗಿರುತ್ತಾರೆಂದೂ ಸದರಿಯವರು ನೀಡಿರುವ ಹೇಳಿಕೆಯನ್ನು ಪರಿಶೀಲಿಸಿದಾಗ ಸದರಿ ಅವಧಿಯಲ್ಲಿ ಲೆಕ್ಕ ಹೊಂದಾಣಿಕೆ ಸಮರ್ಪಕವಾಗಿ ಮಾಡಿಲ್ಲವೆಂದು ಸಹಾ ಕಂಡುಬರುತ್ತದೆಂದು ಸರ್ಕಾರ ತೀರ್ಮಾನಿಸಿ ಸರ್ಕಾರಿ ಹಣದ ದುರುಪಯೋಗಕ್ಕೆ ಡಾ.ಗೋವಿಂದನಾಯಕ್ ಆಡಳಿತ ವಿಮಾ ವೈದ್ಯಾಧಿಕಾರಿ ಹಾಗೂ ಶ್ರೀ ಮಹಮದ್ ಅಜಿಮುದ್ದೀನ್, ದ್ವಿತೀಯ ದರ್ಜೆ ಸಹಾಯಕರು ಇವರು ನೇರವಾಗಿ ಹೊಣೆಗಾರರಾಗಿರುವ ಪ್ರಯುಕ್ತ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಾಮವಳಿ 1957ರ ನಿಯಮ 11(2) ರಡಿ ವಿಚಾರಣಾಧಿಕಾರಿಯವರನ್ನು ನೇಮಿಸುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ನಿರ್ದೇಶಕರು ಕೋರಿದ್ದರ ಮೇರೆಗೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಎಂ.ಎಸ್.ನಟರಾಜ ಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಮನೋಹರ್ ಕೆ.ಗೂಡೂರ್ ಪ್ರ.ದ.ಸ. ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳ ನಿರ್ದೇಶನಾಲಯ ಇವರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ ಓದಲಾದ (5)ರ ಆದೇಶದಲ್ಲಿ ನೇಮಿಸಲಾಗಿತ್ತು.

ಡಾ:ಎಲ್.ಗೋವಿಂದನಾಯಕ್, ಆಡಳಿತ ವಿಮಾ ವೈದ್ಯಾಧಿಕಾರಿ ಮತ್ತು ಶ್ರೀ ಮಹಮದ್ ಅಜಿಮುದ್ದೀನ್, ದ್ವಿತೀಯ ದರ್ಜೆ ಸಹಾಯಕರು ಇವರ ವಿರುದ್ಧ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ದಿನಾಂಕ:05–06–2006ರಂದು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಡಾ:ಎಲ್.ಗೋವಿಂದನಾಯಕ್ ಇವರ ಮೇಲೆ ಮಾಡಿರುವ ಆಪಾದನೆಗಳು ರುಜುವಾತಾಗಿರುವುದಿಲ್ಲವೆಂದು ಹಾಗೂ ಶ್ರೀ ಮಹಮದ್ ಅಜಿಮುದ್ದೀನ್ ಇವರ ಮೇಲೆ ಮಾಡಿರುವ ಮೂರು ದೋಷಾರೋಪಣೆಗಳು ಅನುಮಾನವಿಲ್ಲದ ರೀತಿ ರುಜುವಾತಾಗಿರುತ್ತದೆಂದು ಅಭಿಪ್ರಾಯಪಟ್ಟಿರುತ್ತಾರೆ. ಶ್ರೀ ಮಹಮದ್ ಅಜೀಮುದ್ದೀನ್, ದ್ವಿತೀಯ ದರ್ಜೆ ಸಹಾಯಕರು ಇವರ ಮೇಲೆ ಮಾಡಲಾದ ದೋಷಾರೋಪಣೆಗಳು ಈ ಕೆಳಕಂಡಂತಿವೆ.

1. ಶ್ರೀ ಮಹಮ್ಮದ್ ಅಜೀಮುದ್ದೀನ್, ದ್ವಿತೀಯ ದರ್ಜೆ ಸಹಾಯಕರು, ಕಾರಾವಿ ಚಿಕಿತ್ಸಾಲಯ, ವಾಡಿ, ಗುಲ್ಬರ್ಗಾ ಜಿಲ್ಲಾ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಾಖಲಾತಿಯನ್ನು ಸರಿಯಾಗಿ ನಿರ್ವಹಿಸದೇ ಆಡಳಿತ ವಿಮಾ ವೈದ್ಯಾಧಿಕಾರಿಗಳ ಮತ್ತು ಬಾಡಿಗೆಯಿರುವ ಚಿಕಿತ್ಸಾಲಯ ಕಟ್ಟಡದ ಮಾಲೀಕರ ಖೋಟಾ ಸಹಿಯನ್ನು ಮಾಡಿ ರೂ.1,10,440–00ರಷ್ಟು ಸರ್ಕಾರಿ ಹಣವನ್ನು ದುರುಪಯೋಗ ಮಾಡುವ ಮೂಲಕ ಸರ್ಕಾರಿ ನೌಕರರಿಗೆ ತಕ್ಕದಲ್ಲದಂತಹ ನಡತೆಯನ್ನು ಪ್ರದರ್ಶಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮಗಳ ನಿಯಮ 3ನ್ನು ಉಲ್ಲಂಘಿಸಿರುತ್ತಾರೆ.

2. ಶ್ರೀ ಮಹಮ್ಮದ್ ಅಜಿಮುದ್ದೀನ್, ದ್ವಿತೀಯ ದರ್ಜೆ ಸಹಾಯಕರು, ಕಾರಾವಿ ಚಿಕಿತ್ಸಾಲಯ, ವಾಡಿ ಗುಲ್ಬರ್ಗಾ ಜಿಲ್ಲೆ ಇವರು ಕರ್ತವ್ಯ ನಿರ್ವಹಿಸುತ್ತಿದ್ದಾಗ ಸುಮಾರು 2 ವರ್ಷ 2 ತಿಂಗಳ ಅವಧಿಯಲ್ಲಿ ಚಿಕಿತ್ಸಾಲಯದ ದಾಖಲೆಗಳಾದ ನಗದು ಪುಸ್ತಕ, ಬಟವಾಡೆ ಪುಸ್ತಕ, ಡಿ.ಸಿ.ಬಿಲ್ ರಿಜಿಸ್ಟರು, ಆಯವ್ಯಯ ಪುಸ್ತಕ, ನಗದೀಕರಣ ಪುಸ್ತಕ, ಟೋಕನ್ ರಿಜಿಸ್ಟರುಗಳು ಡಿ.ಸಿ.ಬಿಲ್ಗೆ ಸಂಬಂಧಿಸಿದ ಓಚರ್‌ಗಳನ್ನು ಸರಿಯಾಗಿ ನಿರ್ವಹಿಸದಿರುವುದು, ದಾಖಲೆಗಳನ್ನು ತಿದ್ದಿರುವುದು ಮತ್ತು ಆಡಳಿತ ವಿಮಾ ವೈದ್ಯಾಧಿಕಾರಿಗಳ ಗಮನಕ್ಕೆ ತರದೆ ಕರ್ತವ್ಯದ ಬಗ್ಗೆ ನಿರ್ಲಕ್ಷ್ಯತೆಯನ್ನು ತೋರಿರುತ್ತಾರೆ. ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 24, 50, 51, 57, 331 ಮತ್ತು 346ರ ನಿಯಮಗಳನ್ವಯ ಕರ್ತವ್ಯವನ್ನು ನಿರ್ವಹಿಸದೇ ಉಲ್ಲಂಘಿಸಿರುತ್ತಾರೆ.

3. ಶ್ರೀ ಮಹಮ್ಮದ್ ಅಜೀಮುದ್ದೀನ್, ದ್ವಿತಿಯ ದರ್ಜೆ ಸಹಾಯಕರು, ಕಾರಾವಿ ಚಿಕಿತ್ಸಾಲಯ, ವಾಡಿ, ಗುಲ್ಬರ್ಗಾ ಜಿಲ್ಲೆ ಇವರು ಸರ್ಕಾರಿ ಹಣವನ್ನು ರೂ.1,10,440–00ನ್ನು ದುರುಪಯೋಗಪಡಿಸಿಕೊಂಡು, ದಿನಾಂಕ:21–03–1994 ರಿಂದ ಸಕ್ಷಮ ಪ್ರಾಧಿಕಾರದಿಂದ ರಜೆಯನ್ನು ಮಂಜೂರಾತಿ ಪಡೆಯದೇ ಮತ್ತು ಪೂರ್ವಾನುಮತಿಯಿಲ್ಲದೇ ಸೇವೆಗೆ ಗೈರು ಹಾಜರಾಗಿರುವುದು, ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 106(ಎ) ರ ನಿಯಮದನ್ವಯ ದುರ್ವರ್ತನೆಯ ಅಪರಾಧವಾಗುವುದು, ಇದೇ ನಿಯಮಾವಳಿಯ 108ನೆಯ ನಿಯಮದ ಮೇರೆಗೆ ರಜೆ ಪಡೆಯದೆ 4

ತಿಂಗಳು ಅಥವಾ ಅದಕ್ಕೂ ಹೆಚ್ಚಿನ ಅವಧಿಯವರೆಗೆ ಕರ್ತವ್ಯದಿಂದ ಗೈರು ಹಾಜರಾಗುವ ಅಧಿಕಾರಿ: ನೌಕರರು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರಲ್ಲಿ ವಿಧಿಸಿದ ಕಾರ್ಯವಿಧಾನವನ್ನು ಅನುಸರಿಸಿದ ತರುವಾಯ ಕೆಲಸದಿಂದ ವಜಾ ಮಾಡಲ್ಪಡುವ ದಂಡನೆಗೆ ಗುರಿಯಾಗಿರುತ್ತಾರೆ.

ಶ್ರೀ ಮಹಮದ್ ಅಜೀಮುದ್ದೀನ್, ದ್ವಿತೀಯ ದರ್ಜೆ ಸಹಾಯಕರು ಇವರ ಮೇಲೆ ಮಾಡಿರುವ ಮೂರು ದೋಷಾರೋಪಣೆಗಳು ವಿಚಾರಣಾ ವರದಿಯಿಂದ ಸಾಬೀತಾಗಿರುವುದರಿಂದ ಆಪಾದಿತ ಸರ್ಕಾರಿ ನೌಕರನಿಗೆ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಕಳುಹಿಸಿ ವರದಿಯಲ್ಲಿನ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದು ಎಂಬ ಬಗ್ಗೆ ತಮ್ಮ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ಸಲ್ಲಿಸುವಂತೆ 2ನೇ ಷೋಕಾಸ್ ನೋಟಿಸನ್ನು ದಿನಾಂಕ:14–08–2006 ಮತ್ತು 08–01–2008ರಂದು ಆಪಾದಿತ ನೌಕರನ ವಿಳಾಸಕ್ಕೆ ನೊಂದಾಯಿತ ಅಂಚೆ ಸ್ವೀಕೃತಿ ಪತ್ರದೊಡನೆ ರವಾನಿಸಿದ್ದು, ಆದರೆ ಸದರಿ ನೋಟಿಸ್ ಬಟವಾಡೆಯಾಗದೆ ಹಿಂದುರುಗಿ ಬಂದ ಹಿನ್ನೆಲೆಯಲ್ಲಿ ಈ ಬಗ್ಗೆ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿದ್ದರೂ ಸಹ ಆಪಾದಿತರು ಇದುವರೆವಿಗೂ ಲಿಖಿತ ಹೇಳಿಕೆಯನ್ನು ನೀಡಿರುವುದಿಲ್ಲ. ಆದ್ದರಿಂದ ಶ್ರೀ ಮಹಮದ್ ಅಜಿಮುದ್ದೀನ್ ಇವರು ರೂ.1,10,440–00ಗಳ ಸರ್ಕಾರಿ ಹಣ ದುರುಪಯೋಗಪಡಿಸಿಕೊಂಡಿರುವುದು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವ ಹಿನ್ನೆಲೆಯಲ್ಲಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (VIII) ರ ಅಡಿಯಲ್ಲಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಾಇ 65 ಎಲ್‌ಎಸ್‌ಐ 2000, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಮಹಮದ್ ಅಜಿಮುದ್ದೀನ್, ದ್ವಿತೀಯ ದರ್ಜೆ ಸಹಾಯಕರು ಇವರ ಮೇಲಿನ ಆರೋಪವು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (VIII) ರ ಅನುಸಾರ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದಸ್ವಾಮಿ**

ಪಿ.ಆರ್. 2510

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ, (ಕಾರಾವಿ ಯೋ(ವೈ) ಸೇವೆಗಳು)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಮುಖ್ಯ ಸಂಪಾದಕರು ಮತ್ತು ಹಿರಿಯ ಸಂಪಾದಕರು (ಪ್ರ) ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಇವರ ಹೆಸರಿನಲ್ಲಿ Joint Current A/C ತೆರೆಯುವ ಬಗ್ಗೆ

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 92 ಕೆಎಂಯು 2007 ದಿನಾಂಕ:02–08–2008

2. ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಬೆಂಗಳೂರು ಅವರ ಪತ್ರ ಸಂ:ಕಗ್ಯಾಇ 2009–10/302 ದಿನಾಂಕ:10–08–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:02–08–2008ರ ಸರ್ಕಾರಿ ಆದೇಶದಲ್ಲಿ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ 150ನೇ ವರ್ಷಾಚರಣೆ ಹಾಗೂ ಟಿಪ್ಪು ಸುಲ್ತಾನನ ಸ್ಮಾರಣಾರ್ಥ ಕಾರ್ಯಕ್ರಮ ಹಮ್ಮಿಕೊಳ್ಳಲು ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ರೂ.2.50 ಕೋಟಿಗಳಲ್ಲಿ ರೂ.10.00ಲಕ್ಷ ಅನುದಾನವನ್ನು ಕರ್ನಾಟಕ ಗ್ಯಾಸೆಟಿಯರ್ ಇಲಾಖೆಗೆ "Tippu Sultan-A Crusadar for change" ಗ್ರಂಥ ರಚಿಸಲು ಬಿಡುಗಡೆ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:10–08–2009ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಇಲಾಖೆ, ಮೈಸೂರು ಇವರು ಪಿ.ಡಿ.ಖಾತೆ ಸಂಖ್ಯೆ:06000001 ರಿಂದ ಚೆಕ್ ಸಂಖ್ಯೆ 614009ರ ಮೊತ್ತ ರೂ.10.00ಲಕ್ಷಗಳಿಗೆ ಚೆಕ್ ನೀಡಿದ್ದು, ಆ ಚೆಕ್‌ನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಸಿಬಿಎಬಿ ಕಾಂಪ್ಲೆಕ್ಸ್, ಕಾವೇರಿ ಭವನ ಶಾಖೆಯಲ್ಲಿ ಮುಖ್ಯ ಸಂಪಾದಕರು ಹಾಗೂ ಹಿರಿಯ ಸಂಪಾದಕರು (ಪ್ರ) ಇವರ ಹೆಸರಿನಲ್ಲಿ Joint Current A/C ತೆರೆಯಲಾಗಿದೆ ಎಂದು (ಖಾತೆ ಸಂಖ್ಯೆ–64046993907), ಖಾತೆ ತೆರೆದಿರುವುದಕ್ಕೆ ಘಟನೋತ್ತರವಾಗಿ ಆಡಳಿತಾತ್ಮಕ ಮಂಜೂರಾತಿ ನೀಡಬೇಕೆಂದು ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 14 ಕರಾಗೆ 2009, ಬೆಂಗಳೂರು ದಿನಾಂಕ: 30ನೇ ಅಕ್ಟೋಬರ್ 2009**

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ 150ನೇ ವರ್ಷಾಚರಣೆ ಹಾಗೂ ಟಿಪ್ಪು ಸುಲ್ತಾನನ ಸ್ಮಾರಣಾರ್ಥ "Tippu Sultan-A Crusadar for change" ಗ್ರಂಥವನ್ನು ರಚಿಸಲು ಕರ್ನಾಟಕ ಗ್ಯಾಸೆಟಿಯರ್ ಇಲಾಖೆಗೆ ಬಿಡುಗಡೆ ಮಾಡಿದ ರೂ.10.00ಲಕ್ಷಗಳಿಗೆ ಸಂಬಂಧಿಸಿದ ಚೆಕ್ (ಸಂಖ್ಯೆ–614009) ನ್ನು ನಗದೀಕರಿಸಲು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಸಿಬಿಎಬಿ ಕಾಂಪ್ಲೆಕ್ಸ್, ಕಾವೇರಿ ಭವನ ಶಾಖೆಯಲ್ಲಿ ಮುಖ್ಯ ಸಂಪಾದಕರು ಹಾಗೂ ಹಿರಿಯ ಸಂಪಾದಕರು (ಪ್ರ) ಇವರ ಹೆಸರಿನಲ್ಲಿ Joint Current A/c ತೆರೆಯುವುದಕ್ಕೆ (ಖಾತೆ ಸಂಖ್ಯೆ–64046993907) ನಿಶ್ಚಿತ ಕಾರ್ಯವು ಮುಗಿದ ಬಳಿಕೆ ಖಾತೆಯನ್ನು ಮುಕ್ತಾಯಗೊಳಿಸುವ ಷರತ್ತಿಗೊಳಪಟ್ಟು ಘಟನೋತ್ತರ ಮಂಜೂರಾತಿ ನೀಡಿದೆ.

ಈ ಆದೇಶವನ್ನು ದಿನಾಂಕ:12–10–2009ರ ಟಿಪ್ಪಣಿ ಸಂಖ್ಯೆ: ಎಫ್ 927 ವೆಚ್ಚ–7/2009/ರಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2511 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ಬೆಂಗಳೂರು ವೆಂಕಟಪ್ಪ ಚಿತ್ರಶಾಲೆಯ ನಿರ್ವಹಣೆಗಾಗಿ ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 127 ಕೆಎಂಯು 2007. ದಿನಾಂಕ 22.12.2007

2) ನಿರ್ದೇಶಕರು. ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ವೆಂಚಿಶಾಸಸ/2009–10 ದಿನಾಂಕ 29.10.2009

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ವೆಂಕಟಪ್ಪ ಚಿತ್ರಶಾಲೆ, ಬೆಂಗಳೂರು ಇದರ ನಿರ್ವಹಣೆಗಾಗಿ 11 ಸದಸ್ಯರಗಳನ್ನೊಳಗೊಂಡ ಸಲಹಾ ಸಮಿತಿಯನ್ನು ರಚಿಸಿ ಆದೇಶಿಸಲಾಗಿದೆ. ತದನಂತರ ದಿನಾಂಕ 30.04.2009ರಂದು ನಡೆದ ಸಲಹಾ ಸಮಿತಿ ಸಭೆಯಲ್ಲಿ ವೆಂಕಟಪ್ಪ ಚಿತ್ರಶಾಲೆ ಸಲಹಾ ಸಮಿತಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರನ್ನು ಸದಸ್ಯರನ್ನಾಗಿ ನೇಮಿಸಲು ಮತ್ತು ಸದರಿ ಸಲಹಾ ಸಮಿತಿ ಸಭೆಯನ್ನು ವರ್ಷಕ್ಕೆ ಕನಿಷ್ಟ 4 ಸಾರಿ ನಡೆಸಲು ತೀರ್ಮಾನಿಸಲಾಗಿದೆ.

ಮೇಲೆ ಓದಲಾದ (2) ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಇಲಾಖೆ, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ವೆಂಕಟಪ್ಪ ಚಿತ್ರಶಾಲೆ ಸಲಹಾ ಸಮಿತಿಯನ್ನು ಪುನರ್ ರಚಿಸಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 91 ಕೆಎಂಯು 2009, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2009**

ಬೆಂಗಳೂರು, ವೆಂಕಟಪ್ಪ ಚಿತ್ರಶಾಲೆಯ ನಿರ್ವಹಣೆಗಾಗಿ ಸರ್ಕಾರವು ಈ ಕೆಳಕಂಡ ಅಧಿಕಾರಿಗಳು ಮತ್ತು ಕಲಾವಿದರನ್ನು ಒಳಗೊಂಡ ಸಲಹಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸುತ್ತದೆ.

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿಗಳು, ಕನ್ನಡ, ಸಂಸ್ಕೃತಿ, ಮತ್ತು ವಾರ್ತಾ ಇಲಾಖೆ | ಅಧ್ಯಕ್ಷರು |
| 2. | ಶ್ರೀ ಜೆ.ಎಸ್.ಖಂಡೇರಾವ್, ಗುಲ್ಬರ್ಗಾ. | ಸದಸ್ಯರು |
| 3. | ಶ್ರೀಮತಿ ಪುಷ್ಪ ದ್ರಾವಿಡ್, 952, ಹೆಚ್‌ಎಎಲ್ 2ನೇ ಹಂತ, 12ನೇ ಮುಖ್ಯರಸ್ತೆ, ಬೆಂಗಳೂರು–08 | ಸದಸ್ಯರು |
| 4. | ಶ್ರೀಮತಿ ರಾಣಿರೇಖಾ, 801/31, 1ನೇ 'ಎ' ಮುಖ್ಯರಸ್ತೆ, ವೈಯಾಲಿಕಾವಲ್, ಬೆಂಗಳೂರು–03 | ಸದಸ್ಯರು |
| 5. | ಶ್ರೀ ಬಿ.ಎಸ್.ದೇಸಾಯಿ, 7–493, ಐಸಿರಿ ಕಟ್ಟಡ, ಡೆಂಟಲ್ ಕಾಲೇಜು ಹಿಂಭಾಗ, ವಿದ್ಯಾನಗರ, ಹಾಸನ–573201 | ಸದಸ್ಯರು |
| 6. | ಶ್ರೀ ರಾಮಚಂದ್ರನ್, 34/ಬಿ, 6ನೇ ಮುಖ್ಯರಸ್ತೆ, ಶಾರದಾ ಕಾಲೋನಿ ಹತ್ತಿರ, ಬಸವೇಶ್ವರ ನಗರ, ಬೆಂಗಳೂರು– 79 | ಸದಸ್ಯರು |
| 7. | ಶ್ರೀ ರಾಮದಾಸ ಆದ್ಯಂತಾಯ, ಚಾವಡಿ, ಹೆಚ್‌ಐಜಿ, 1734, 8ಐ ಮುಖ್ಯರಸ್ತೆ, 7ನೇ ಅಡ್ಡರಸ್ತೆ, ವಿಜಯನಗರ, 2ನೇ ಹಂತ, ಮೈಸೂರು–57017 | ಸದಸ್ಯರು |

| | | |
|---|---|---|
| 8. | ಶ್ರೀಮತಿ ರಚನಾ ದಮಾಮ್, ದಮಾಮ್ ಹೌಸ್, 57, 1ನೇ ಮುಖ್ಯರಸ್ತೆ, 3ನೇ ಅಡ್ಡರಸ್ತೆ, ಭೈರವೇಶ್ವರ ನಗರ, ನಾಗರಬಾವಿ ರಸ್ತೆ, ಬೆಂಗಳೂರು–72 | ಸದಸ್ಯರು |
| 9. | ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು | ಸದಸ್ಯರು |
| 10. | ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, | ಸದಸ್ಯರು |
| 11. | ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಕಸ್ತೂರ ಬಾ ರಸ್ತೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿಗಳು |

ಸಮಿತಿಯು ವರ್ಷದಲ್ಲಿ ಕನಿಷ್ಠ ನಾಲ್ಕು ಬಾರಿಯಾದರೂ ಸಭೆ ಸೇರಿ ವೆಂಕಟಪ್ಪ ಚಿತ್ರಶಾಲೆಯ ನಿರ್ವಹಣೆಗೆ ಸಂಬಂಧಪಟ್ಟಂತೆ ಮಾರ್ಗದರ್ಶನ, ಸಲಹೆ, ಸೂಚನೆ ಇತ್ಯಾದಿಗಳನ್ನು ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2512 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎನ್. ಚಂದ್ರಶೇಖರ್, ಹಿರಿಯ ಸಹಾಯಕರು, ಇವರ 2008–09ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಾಗಿರುವ ಪ್ರತಿಕೂಲ ಷರಾ ದೃಢೀಕರಿಸುವ ಬಗ್ಗೆ

**ಓದಲಾಗಿದೆ:** ದಿನಾಂಕ: 23–06–2009, ಸಂಖ್ಯೆ: ಸಿಆಸುಇ 10 ವಾರವ 2009ರ ತಿಳುವಳಿಕೆ ಪತ್ರ.

**ಪ್ರಸ್ತಾವನೆ:**

ಶ್ರೀ ಎನ್. ಚಂದ್ರಶೇಖರ್, ಹಿರಿಯ ಸಹಾಯಕರು, ಕಂದಾಯ ಇಲಾಖೆ (ಭೂ ಮಂಜೂರಾತಿ ಮತ್ತು ಭೂ ಕಂದಾಯ) ಕರ್ನಾಟಕ ಸರ್ಕಾರದ ಸಚಿವಾಲಯ, ಇವರ 2008–09ನೇ ಸಾಲಿನ ಕಾರ್ಯನಿರ್ವಹಣಾ ವರದಿಯ ಭಾಗ–3ರಲ್ಲಿ ವರದಿ ಪ್ರಾಧಿಕಾರ ಹಾಗೂ ಭಾಗ–4ರಲ್ಲಿ ಪುನರಾವಲೋಕನ ಪ್ರಾಧಿಕಾರದಿಂದ ದಾಖಲಾಗಿರುವ ಈ ಕೆಳಕಂಡ ಪ್ರತಿಕೂಲ ಷರಾವನ್ನು ದಾಖಲಿಸಿತ್ತು.

**"ಸಾಮಾನ್ಯವಾಗಿ ಆರೋಗ್ಯ ಇಲ್ಲ, ಹಾಜರಿ ತೃಪ್ತಿಕರ ಇಲ್ಲ"**

ಭಾಗ–4 ರಲ್ಲಿ ಪುನರಾವಲೋಕ ಪ್ರಾಧಿಕಾರದಿಂದ ಈ ಕೆಳಕಂಡ ಪ್ರತಿಕೂಲ ಷರಾಗಳು ನಮೂದಾಗಿರುತ್ತದೆ.

**"ಒಪ್ಪುತ್ತೇನೆ, ಕೆಲಸದಲ್ಲಿ ಆಸಕ್ತಿ ವಹಿಸಬೇಕಾಗಿದೆ"**

ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು 2000ರ ನಿಯಮ 9(2) ರನ್ವಯ ಮೇಲ್ಕಂಡ ಪ್ರತಿಕೂಲ ಷರಾಗಳನ್ನು ಶ್ರೀ ಎನ್.ಚಂದ್ರಶೇಖರ್‌ರವರಿಗೆ ತಿಳಿಸಿ, ಇದರ ಬಗ್ಗೆ ಸಮಜಾಯಿಷಿ/ವಿವರಣೆ ಇದ್ದಲ್ಲಿ ಅದನ್ನು ಕೂಡಲೇ ಸಲ್ಲಿಸುವಂತೆ ಸೂಚಿಸಲಾಗಿತ್ತು. ಆದರೆ ಶ್ರೀ ಎನ್.ಚಂದ್ರಶೇಖರ್‌ರವರಿಂದ ಈತನಕ ಯಾವುದೇ ವಿವರಣೆ ಬಂದಿರುವುದಿಲ್ಲ/ ಮೇಲ್ಮನವಿ ಸಲ್ಲಿಸಿರುವುದಿಲ್ಲ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ವಾರವ 2009, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಾವಳಿಗಳು 2000ರ ನಿಯಮ 10 (2) ರನ್ವಯ ಶ್ರೀ ಎನ್.ಚಂದ್ರಶೇಖರ್, ಹಿರಿಯ ಸಹಾಯಕರು, ಕಂದಾಯ ಇಲಾಖೆ (ಭೂ ಮಂಜೂರಾತಿ ಮತ್ತು ಭೂ ಕಂದಾಯ) ಇವರ 2008–09ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ವರದಿ ಪ್ರಾಧಿಕಾರ ಮತ್ತು ಪುನರಾವಲೋಕನ ಪ್ರಾಧಿಕಾರ ದಾಖಲಿಸಿದ ಪ್ರತಿಕೂಲ ಷರಾಗಳನ್ನು ದೃಢೀಕರಿಸಲು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಾಯ್ಸ್ ಸುರೇಂದ್ರ**

ಪಿ.ಆರ್. 2513 ಸರ್ಕಾರದ ಜಂಟಿ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಕೋರೆವೀರಪ್ಪ, ಮಾಜಿ ಸಹಾಯಕ ಆಡಳಿತಾಧಿಕಾರಿ ಮತ್ತು ಶ್ರೀ ಸಫಿರೂರ್ ರೆಹಮಾನ್, ದ್ವಿ.ದ.ಸ.ರವರುಗಳು ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿರುವ ಬಗ್ಗೆ.

**ಓದಲಾಗಿದೆ:** 1) ದೋಷಾರೋಪಣಾ ಪತ್ರ ಸಂಖ್ಯೆ: ಸಿಬಿ(8)79/2005–06 ದಿ:14–03–2006

2) ಶ್ರೀ ಕೋರೆವೀರಪ್ಪ, ಎ.ಎ.ಓ ಮತ್ತು ಶ್ರೀ ಸಫಿರೂರ್ ರೆಹಮಾನ್ ದ್ವಿ.ದ.ಸ.ರವರುಗಳು ದೋಷಾರೋಪಣಾ ಪತ್ರವನ್ನು ಕ್ರಮವಾಗಿ ದಿನಾಂಕ: 17–03–2006 ಮತ್ತು 27–03–2006ರಂದು ಸ್ವೀಕರಿಸಿ ಸಮಜಾಯಿಷಿಯನ್ನು ಕ್ರಮವಾಗಿ ದಿ:04–04–2006 ಮತ್ತು 12–04–2006ರಂದು ಸಲ್ಲಿಸಿರುತ್ತಾರೆ.

3) ಇಲಾಖಾ ವಿಚಾರಣಾಧಿಕಾರಿಗಳ ವರದಿ ಸಂಖ್ಯೆ: ಪಿಟಿಷನ್/ಡಿ.ಎಸ್.ಪಿ/ಡಿಇ–2/2005, ದಿ:14/16–12–2005

4) ಶಿಸ್ತು ಪ್ರಾಧಿಕಾರಿಯವರು ಹೊರಡಿಸಿದ ಅಂತಿಮ ಆದೇಶ ಸಂಖ್ಯೆ:ಸಿಬಿ(8)79/2005–06 ದಿ:29–01–2009.

5) ಶ್ರೀ ಕೋರೇವೀರಪ್ಪ, ಎ.ಎ.ಓ ಮತ್ತು ಶ್ರೀ ಸಫಿರೂರ್ ರೆಹಮಾನ್, ದ್ವಿ.ದ.ಸ. ರವರು ಸರ್ಕಾರಕ್ಕೆ ಸಲ್ಲಿಸಿದ ಮೇಲ್ಮನವಿ ಕ್ರಮವಾಗಿ ದಿ:16–02–2009 ಮತ್ತು 19–02–2009.

6) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ/113/ಸಿಎನ್ಎಸ್/09 ದಿ:15–10–2009

**ಪ್ರಸ್ತಾವನೆ:**

ಶ್ರೀ ಕೋರೆವೀರಪ್ಪ, ಮಾಜಿ ಸಹಾಕಯ ಆಡಳಿತಾಧಿಕಾರಿ ಮತ್ತು ಶ್ರೀ ಸಫಿರೂರ್ ರೆಹಮಾನ್, ದ್ವಿತೀಯ ದರ್ಜೆ ಸಹಾಯಕರವರುಗಳು ಈ ಹಿಂದೆ ಜಿಲ್ಲಾ ಪೊಲೀಸ್ ಕಚೇರಿ, ಬೆಂಗಳೂರು ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಈ ಕೆಳಕಂಡ ಆರೋಪಗಳನ್ನು ಎಸಗಿ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಕರ್ತವ್ಯಲೋಪ, ಕರ್ತವ್ಯಚ್ಯುತಿ ಮತ್ತು ದುರ್ನಡತೆಯನ್ನು ಎಸಗಿರುವುದರಿಂದ, ಅವರುಗಳ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ನಿಯಮ 9(2) ಸಿ ಮತ್ತು ಜೊತೆಗೆ ಓದಲು ನಿಯಮ 11(3) ಹಾಗೂ ನಿಯಮ 13(1) ರಡಿಯಲ್ಲಿ ಮೇಲೆ ಓದಲಾದ (1) ರ ಪತ್ರದಲ್ಲಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಸದರಿಯವರುಗಳ ವಿರುದ್ಧ ಹೊರಿಸಲಾಗಿರುತ್ತದೆ.

**ದೋಷಾರೋಪಣೆಗಳು:**

**ಶ್ರೀ ಕೋರೆವೀರಪ್ಪ, ಮಾಜಿ ಸಹಾಯಕ ಆಡಳಿತಾಧಿಕಾರಿ:**

1) ಪೊಲೀಸ್ ಪೇದೆ, ಮುಖ್ಯ ಪೇದೆ ಇವರುಗಳಿಗೆ ಬೇಕಾದ ಸ್ಥಳಗಳಿಗೆ ವರ್ಗಾವಣೆ ಮಾಡಿಸಿದ್ದು, ಕೆಲವರಿಗೆ ಬಡ್ತಿ ನೀಡಿ, ಅದೇ ಪೊಲೀಸ್ ಠಾಣೆಗಳಲ್ಲಿ ಕರ್ತವ್ಯ ಮುಂದುವರೆಸಲು ಅನುಕೂಲ ಮಾಡಿಕೊಟ್ಟಿದ್ದು, ಮಹಿಳಾ ಪೊಲೀಸ್ ಅಧಿಕಾರಿಗಳನ್ನು ಪೊಲೀಸ್ ವೃತ್ತದ ಕೇಂದ್ರದಲ್ಲಿನ ಪೊಲೀಸ್ ಠಾಣೆಗೆ ಒದಗಿಸಬೇಕೆಂದು ಸರ್ಕಾರದ ಆದೇಶ ಇದ್ದರೂ, ಇವರುಗಳಿಗೆ ಅನುಕೂಲ ಆಗುವ ಪೊಲೀಸ್ ಠಾಣೆಗಳಿಗೆ ಬಡ್ತಿ ನೀಡಿ, ನಿಯೋಜಿಸಿ ಕರ್ತವ್ಯ ಲೋಪ ಎಸಗಿರುತ್ತೀರಿ.

2) 2004ರ ಪೊಲೀಸ್ ಕಾನ್ಸ್‌ಟೇಬಲ್‌ಗಳ ನೇಮಕಾತಿ ಸಂದರ್ಭದಲ್ಲಿ ಎಸ್‌ಪಿರವರ ಸಿಬ್ಬಂದಿಗಳಿಗೆ ಪರೀಕ್ಷಾ ಕೊಠಡಿಯ ಮೇಲ್ವಿಚಾರಕರಾಗಿ ನೇಮಕ ಮಾಡಿದ್ದು, ಚನ್ನಪಟ್ಟಣದ ಪರೀಕ್ಷಾ ಕೇಂದ್ರದ ಕೊಠಡಿಗಳಿಗೆ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಲು ಹೋದಾಗ, ಅಲ್ಲೇ ಹಾಜರಾಗಿದ್ದ ನೀವು, ಈ ಮೊದಲೇ ನಿಯೋಜಿಸಿದ್ದ ಸಿಬ್ಬಂಧಿಗಳ ಕೊಠಡಿಗಳನ್ನು ಮತ್ತೆ ಬದಲಾಯಿಸಿ, ನಿಮಗೆ ಬೇಕಾದ ಅಭ್ಯರ್ಥಿಗಳಿಗೆ ಅನುಕೂಲ ಮಾಡಿ ಕೊಡುವ ಉದ್ದೇಶದಿಂದ ಬೇರೆ ಬೇರೆ ಕೊಠಡಿಗಳಿಗೆ ನೇಮಕ ಮಾಡಿ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ಕರ್ತವ್ಯಲೋಪ ಪ್ರದರ್ಶಿಸಿರುತ್ತೀರಿ.

3) ಅದೇ ರೀತಿ ಅಭ್ಯರ್ಥಿಗಳು ನೇಮಕಾತಿ ಸಮಯದಲ್ಲಿ ನೇಮಕಾತಿಗೊಂಡ ನಂತರ ಅವರುಗಳ ವಿಳಾಸಕ್ಕೆ ನೊಂದಾಯಿಸಿದ ಅಂಚೆ ಮೂಲಕವೇ ನೇಮಕಾತಿ ಆದೇಶವನ್ನು ಕಳುಹಿಸುವುದು ನಿಯಮವಾಗಿರುತ್ತದೆ. ಆದರೆ ನೀವು ಹಾಗೆ ಮಾಡದೆ, ಕೆಲವರಿಗೆ ಮಾತ್ರ ರಿಜಿಸ್ಟರ್ ಪೋಸ್ಟ್ ಮೂಲಕ ಕಳುಹಿಸಿ, ನಿಮಗೆ ಬೇಕಾದ ಅಭ್ಯರ್ಥಿಗಳಿಗೆ ಮುದ್ದಾಂ ನೀಡಿ ಅವರಿಂದ ಪ್ರತಿಫಲ ಪಡೆಯುವ ಉದ್ದೇಶದಿಂದ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಬೇಜವಾಬ್ದಾರಿತನ ಮತ್ತು ಕರ್ತವ್ಯ ಲೋಪ ಎಸಗುತ್ತೀರಿ.

4) ಪೇದೆಗಳ ನೇಮಕಾತಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಮುಖ್ಯಪಟ್ಟಿಯನ್ನು ನೋಟಿಸ್ ಬೋರ್ಡ್‌ನಲ್ಲಿ ಪ್ರಕಟಿಸಿದ ನಂತರ ಅಭ್ಯರ್ಥಿಗಳ ಹೆಚ್ಚುವರಿ ಪಟ್ಟಿಯನ್ನು ನೋಟಿಸ್ ಬೋರ್ಡ್‌ನಲ್ಲಿ ಪ್ರಕಟಿಸದೆ ನಿಮ್ಮ ಬಳಿ ಹಾಗೆಯೇ ಇಟ್ಟುಕೊಂಡು, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಬೇಜಾವಾಬ್ದಾರಿತನ ಮತ್ತು ಕರ್ತವ್ಯ ಲೋಪ ಎಸಗುತ್ತೀರಿ.

5) ಇಲಾಖಾ ವಿಚಾರಣೆಗಳಲ್ಲಿ, ಪೊಲೀಸ್ ಅಧಿಕಾರಿಗಳಿಗೆ ಶಿಕ್ಷೆಯಾಗಿದೆ ಎಂದು ಅವರುಗಳ ಭಂಟರಿಂದ ದೂರವಾಣಿ ಮೂಲಕ ತಿಳಿಸಿ, ಅವರಿಂದ ವ್ಯವಹಾರವಾದ ನಂತರ ಆ ಶಿಕ್ಷೆಗಳಿಂದ ನಿರ್ದೋಷಿ ಎಂದು ಮಾಡಿಸಿ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಮತ್ತು ಕರ್ತವ್ಯ ಲೋಪ ಎಸಗುತ್ತೀರಿ.

6) ಇನ್ನು ಕೆಲವು ಇಲಾಖಾ ವಿಚಾರಣಾ ಕಡತದಲ್ಲಿ, ಎಸ್‌ಪಿ, ಬೆಂಗಳೂರು ಜಿಲ್ಲೆರವರು ಶಿಕ್ಷೆ ವಿಧಿಸಿದ್ದು, ಅವರಿಂದ ವ್ಯವಹಾರ ಮಾಡಿಕೊಂಡ ನಂತರ, ಶಿಕ್ಷೆಯಾಗಿರುವ ದಾಖಲಾತಿಗಳನ್ನು ಯಾವುದೇ ಸೇವಾ ಪುಸ್ತಕದಲ್ಲಿ ನಮೂದು ಮಾಡದೆ ಹಾಗೆ ಇಟ್ಟು, ಅವರುಗಳು ಮುಂಬಡ್ತಿ ಹೊಂದಲು ಕಾರಣರಾಗಿ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಕರ್ತವ್ಯಚ್ಯುತಿ ಮತ್ತು ಕರ್ತವ್ಯ ಲೋಪ ಎಸಗುತ್ತೀರಿ.

7) ಪೊಲೀಸ್ ಅಧಿಕಾರಿಗಳು/ಸಿಬ್ಬಂದಿಗಳು ವರ್ಗಾವಣೆ, ಮುಂಬಡ್ತಿ ಹೊಂದಿದಾಗ, ನೀವು ಪೊಲೀಸ್ ಅಧೀಕ್ಷಕರವರಿಗೆ ಕಡತವನ್ನು ಮಂಡಿಸಬೇಕು. ಆದರೆ ನೀವೇ ಆದೇಶ ಮಾಡಿ, ನಂತರ ಪೊಲೀಸ್ ಅಧೀಕ್ಷಕರವರ ಸಹಿ ಮಾತ್ರ ಮಾಡಿಸಿ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ, ಅಧಿಕಾರ ದುರುಪಯೋಗ ಮತ್ತು ಕರ್ತವ್ಯ ಲೋಪ ಎಸಗುತ್ತೀರಿ.

8) ಮೇಲ್ಕಂಡ ಎಲ್ಲಾ ಶಾಖೆಯ ಕಡತಗಳನ್ನು ಸಂಬಂಧಪಟ್ಟ ಸಿಬ್ಬಂದಿಗಳಿಗೆ ಕಡತ ಮಂಡಿಸಲು ಬಿಡದೆ, ನಿಮ್ಮ ಅನುಕೂಲಕ್ಕೆ ತಕ್ಕಂತೆ ಕಡತಗಳನ್ನು ಮಂಡಿಸಿ, ನಂತರ ಸಂಬಂಧಪಟ್ಟ ಸಿಬ್ಬಂದಿಗಳ ಸಹಿ ಹಾಕಿಸಿಕೊಂಡು, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ, ಅಧಿಕಾರ ದುರುಪಯೋಗ ಮತ್ತು ಕರ್ತವ್ಯ ಲೋಪ ಎಸಗುತ್ತೀರಿ.

9) ಕಛೇರಿಯ ಸ್ಟೇಷನರಿ, ಫರ್ನಿಚರ್‌ಗಳು ಖರೀದಿಸಬೇಕಾದರೆ, ಜನತಾ ಬಜಾರ್‌ನಲ್ಲೇ ಖರೀದಿಸಬೇಕು ಎಂದು ನಿಯಮವಿದ್ದರೂ, ಅವುಗಳನ್ನು ಗಾಳಿಗೆ ತೂರಿ, ನೀವು ನಿಮಗೆ ಅನುಕೂಲವಾಗುವ ಕಡೆ ಖರೀದಿಸಿ, ನಿಯಮಗಳನ್ನು ಉಲ್ಲಂಘಿಸಿ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ, ಕರ್ತವ್ಯ ಲೋಪ ಮತ್ತು ಕರ್ತವ್ಯಚ್ಯುತಿ ಎಸಗುತ್ತೀರಿ.

10) ಇಲಾಖಾ ವಿಚಾರಣೆ ಕಡತಗಳಲ್ಲಿ, ವಿಚಾರಣಾಧಿಕಾರಿಯವರ ಅಭಿಪ್ರಾಯವನ್ನು ಕಡತಗಳಲ್ಲಿ ಮಂಡಿಸಬೇಕೆ ವಿನಃ ಯಾವುದೇ ಕಡತ ನಿರ್ವಾಹಕನಾಗಲೀ ಅಥವಾ ಜಿಹೆಚ್‌ಎ ರವರಾಗಲೀ, ಅಭಿಪ್ರಾಯದ ಮೇಲೆ ಯಾವುದೇ ರೀತಿಯ ಶಿಫಾರಸ್ಸು ಮಾಡಬಾರದು. ಇವುಗಳನ್ನು ಶಿಸ್ತಿನ ಪ್ರಾಧಿಕಾರಿಯವರೇ ತಮ್ಮ ಹಸ್ತದಲ್ಲಿ ನಮೂದು ಮಾಡಬೇಕಾಗಿರುತ್ತದೆ. ಆದರೆ ನೀವು ವಿಚಾರಣಾ ಕಡತಗಳಲ್ಲಿ, ನಿಮಗೆ ತೋರಿದ್ದನ್ನು ನಿಮ್ಮ ಅನುಕೂಲಕ್ಕಾಗಿ ಬರೆದು, ಇದಕ್ಕೆ ಶಿಸ್ತಿನ ಪ್ರಾಧಿಕಾರಿಯವರಿಂದ ಸಹಿ ಪಡೆಯುವ ಮೂಲಕ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ, ಕರ್ತವ್ಯ ಲೋಪ ಮತ್ತು ಕರ್ತವ್ಯ ಚ್ಯುತಿ ಎಸಗಿರುತ್ತೀರಿ.

11) ಯಾವುದೇ ಒಬ್ಬ ಸರ್ಕಾರಿ ನೌಕರನ ಸೇವಾ ಪುಸ್ತಕ ತೆರೆಯಬೇಕಾದರೆ, ಆ ಸೇವಾ ಪುಸ್ತಕ ನಿರ್ವಹಿಸುವ ಜವಾಬ್ದಾರಿ ವಹಿಸಿರುವ ಸಿಬ್ಬಂದಿ ಹೊಣೆಗಾರರಾಗಿರುತ್ತಾರೆ. ಹಾಗೆಯೇ ನಕಲು ಸೇವಾ ಪುಸ್ತಕ ತೆರೆಯಬೇಕಾದರೆ, ಹಿರಿಯ ಅಧಿಕಾರಿಯಿಂದ ಅನುಮತಿ ಪಡೆದು, ನಂತರ ಹೊಸ ಸೇವಾ ಪುಸ್ತಕವನ್ನು ತೆರೆಯಬೇಕಾಗುತ್ತದೆ. ಈ ನಿಯಮಗಳನ್ನು ಪಾಲಿಸದೆ, ಅವರುಗಳಿಗೆ ಬೇಕಾದಾಗ ಸೇವಾ ಪುಸ್ತಕಗಳನ್ನು ತೆರೆದು, ಕೆಲವು ಮುಖ್ಯಪುಟಗಳನ್ನು ಕಿತ್ತು ಹಾಕಿ, ಬಿಳಿ ಹಾಳೆಯಲ್ಲಿ ನಕಲು ಎಂದು ಬರೆದು, ಅದರಲ್ಲಿ ಶಿಕ್ಷೆಯಾಗಿರುವುದನ್ನು ಬಿಟ್ಟಿರುತ್ತಾರೆ. ಗಳಿಕೆ ರಜೆಗಳನ್ನು ಅವರಿಗೆ ಅನುಕೂಲವಾಗುವಷ್ಟು ನಮೂದು ಮಾಡಿ, ಗಳಿಕೆ ರಜೆಯ ನಗದು ಹಣ ಆ ಸಿಬ್ಬಂದಿಗೆ ಸಿಗುವಂತೆ ಮಾಡಿರುವುದು, ದುರಾಲೋಚನೆಯಿಂದ ಮಾಡಿರುವುದು ಎದ್ದು ಕಾಣುತ್ತದೆ. ಇದರಲ್ಲಿ ನಿಮ್ಮ ಮತ್ತು ಸೇವಾಪುಸ್ತಕ ನೋಡುವ ಗುಮಾಸ್ತ ಭಾಗಿಯಾಗಿರುತ್ತೀರಿ. ಸಫಿರೂರ್ ರೆಹಮಾನ್, ದ್ವಿದಸ ರವರ ಸೇವಾ ಪುಸ್ತಕದಲ್ಲಿ ಒಂದೇ ದಿನ ಅಧಿಕಾರಿಗಳು ಸಹಿ ಮಾಡಿರುತ್ತಾರೆ. ಇನ್ನು ಕೆಲವು ಕಡೆ ಸಂಖ್ಯೆಗಳು ಇಂಗ್ಲೀಷ್‌ನಲ್ಲಿ ಮುದ್ರಿತವಾಗಿರುತ್ತದೆ. ಇನ್ನು ಕೆಲವು ಭಾಗಗಳಲ್ಲಿ, ಕನ್ನಡದಲ್ಲಿ ಮುದ್ರಿತವಾಗಿರುತ್ತದೆ. ಇದೆಲ್ಲ ನೋಡಿದರೆ, ಬೇರೆ ಬೇರೆ ಸೇವಾ ಪುಸ್ತಕಗಳಿಂದ ತಮಗೆ ಬೇಕಾದ ಪುಟಗಳನ್ನು ತೆಗೆದು, ತಮ್ಮ ಅನುಕೂಲಕ್ಕೆ ಸೇರಿಸಿರುವ ಬಗ್ಗೆ ಕಂಡು ಬರುತ್ತದೆ. ಶ್ರೀ ಸಫಿರೂರ್ ರಹೆಮಾನ್, ದ್ವಿದಸ, ಶ್ರೀ ರಂಗಯ್ಯ, ನಿವೃತ್ತ ಪಿಎಸ್‌ಐ, ಶ್ರೀ ಟಿಎಂ ಮರಿಯಪ್ಪ, ಎಹೆಚ್‌ಸಿ ರವರುಗಳ ಸೇವಾ ಪುಸ್ತಕವನ್ನು ಕೂಲಂಕಷವಾಗಿ ಪರಿಶೀಲಿಸಿ ನೋಡಿದರೆ, ಸುಮಾರು ಲೋಪಾದೋಷಗಳು ಬೆಳಕಿಗೆ ಬರುತ್ತದೆ. ಶ್ರೀ ಸಫಿರೂರ್ ರೆಹಮಾನ್, ದ್ವಿದಸ ರವರ ನಕಲು ಸೇವಾ ಪುಸ್ತಕ ಪರಿಶೀಲಿಸಿದರೆ, ಪುಟ–1 ರಿಂದ 8 ರವರೆಗೆ ಕನ್ನಡದ ಅಂಕಿಯಲ್ಲಿದ್ದು, ಪುಟ 9 ರಿಂದ 24ರವರೆಗೆ ಆಂಗ್ಲ ಅಂಕಿಯಲ್ಲಿದ್ದು, ಪುಟ 25ರಿಂದ 32ರವರೆಗೆ ಮತ್ತೆ ಕನ್ನಡ ಅಂಕಿಯಲ್ಲಿರುತ್ತದೆ. ಇವರುಗಳ ಸೇವಾ ಪುಸ್ತಕವನ್ನು ಸ್ವತಃ ಸಫೀರೂರ್ ರಹೆಮಾನ್, ಎದಸರವರೆ ನಿರ್ವಹಣೆ ಮಾಡುತ್ತಿದ್ದು, ಇದಕ್ಕೆ ನೀವು ಸಹಿ ಹಾಕಿರುತ್ತೀರಿ. ಇದನ್ನೆಲ್ಲ ನೋಡಿದರೆ, ಇದರಲ್ಲಿ ನಿಮ್ಮ ಹಾಗೂ ಶ್ರೀ ಸಫೀರೂರ್ ರಹೆಮಾನ್, ಎದಸ ರವರ ಕೈವಾಡ ಇರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಸದರಿ ದಾಖಲಾತಿಗಳನ್ನು ಬದಲಾಯಿಸಿ, ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ, ಕರ್ತವ್ಯ ಲೋಪ ಮತ್ತು ಕರ್ತವ್ಯಚ್ಯುತಿ ಎಸಗಿರುತ್ತೀರಿ.

**ಶ್ರೀ ಸಫೀರೂರ್ ರೆಹಮಾನ್, ದ್ವಿದಸ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ಈ ಹಿಂದೆ ಜಿಲ್ಲಾ ಪೊಲೀಸ್ ಕಚೇರಿ, ಬೆಂಗಳೂರು ಜಿಲ್ಲೆ.**

ನೀವು ನಿಮ್ಮ ಮತ್ತು ಶ್ರೀ ರಂಗಯ್ಯ, ನಿವೃತ್ತ, ಪಿಎಸ್‌ಐ ಹಾಗೂ ಶ್ರೀ ಟಿಎಂ ಮರಿಯಪ್ಪ, ಎಹೆಚ್‌ಸಿ ರವರುಗಳ ನಕಲು ಸೇವಾ ಪುಸ್ತಕವನ್ನು ತಯಾರಿಸಿದ್ದು, ನಿಮ್ಮ ಸೇವಾ ಪುಸ್ತಕದಲ್ಲಿ ಪುಟ–1 ರಿಂದ 8ರವರೆಗೆ ಕನ್ನಡದ ಅಂಕಿಯಲ್ಲಿದ್ದು, ಪುಟ–9 ರಿಂದ 24ರವರೆಗೆ ಆಂಗ್ಲ ಅಂಕಿಯಲ್ಲಿದ್ದು, ಪುಟ 25ರಿಂದ 32ರವರೆಗೆ ಮತ್ತೆ ಕನ್ನಡ ಅಂಕಿಯಲ್ಲಿರುತ್ತದೆ. ನಿಮ್ಮ

ಸೇವಾ ಪುಸ್ತಕವನ್ನು ಸ್ವತಃ ನೀವೇ ನಿರ್ವಹಣೆ ಮಾಡುತ್ತಿದ್ದು, ಇದಕ್ಕೆ ಜಿಹೆಚ್ಎ ರವರ ಸಹಿ ಹಾಕಿಸಿರುತ್ತೀರಿ. ಇದನ್ನೆಲ್ಲ ನೋಡಿದರೆ, ಇದರಲ್ಲಿ ನಿಮ್ಮ ಹಾಗೂ ಶ್ರೀ ಕೋರೆವೀರಪ್ಪ, ಜಿಹೆಚ್ಎರವರ ಕೈವಾಡ ಇರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಸದರಿ ದಾಖಲಾತಿಗಳನ್ನು ಬದಲಾಯಿಸಿ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ, ಕರ್ತವ್ಯ ಲೋಪ ಮತ್ತು ಕರ್ತವ್ಯಚ್ಯುತಿ ಎಸಗಿರುತ್ತೀರಿ.

ಈ ಸಂಬಂಧ ಇಲಾಖಾ ವಿಚಾರಣೆಯನ್ನು ನಡೆಸಿದ ವಿಚಾರಣಾಧಿಕಾರಿಗಳು ದಿನಾಂಕ 15-02-2008ರಂದು ಅಂತಿಮ ವರದಿಯನ್ನು ಸಲ್ಲಿಸಿ ಶ್ರೀ ಕೋರೆವೀರಪ್ಪ, ಸಹಾಯಕ ಆಡಳಿತಾಧಿಕಾರಿರವರ ವಿರುದ್ಧ 11 ಆರೋಪಗಳ ಪೈಕಿ ಕ್ರಮ ಸಂಖ್ಯೆ:4, 9 ಮತ್ತು 11 ಆರೋಪಗಳು ಸಾಬೀತಾಗಿರುವುದಾಗಿ ಹಾಗೂ ಶ್ರೀ ಸಫೀರೂರ್ ರೆಹಮಾನ್, ಮಾಜಿ ದ್ವಿ.ದ.ಸ. ರವರ ವಿರುದ್ಧ ಆರೋಪ ಸಾಬೀತಾಗಿರುವುದಾಗಿ ಮೇಲೆ ಓದಲಾದ (3)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ. ಶಿಸ್ತು ಪ್ರಾಧಿಕಾರವು ಇಲಾಖಾ ವಿಚಾರಣಾ ವರದಿಯನ್ನು ಒಪ್ಪಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಕೋರೆವೀರಪ್ಪ ಮತ್ತು ಶ್ರೀ ಸಫೀರೂರ್ ರೆಹಮಾನ್, ಚಿಕ್ಕಬಳ್ಳಾಪುರ ಜಿಲ್ಲೆರವರುಗಳನ್ನು ಮೇಲೆ ಓದಲಾದ (4)ರ ಆದೇಶದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿರುತ್ತಾರೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಶ್ರೀ ಕೋರೆವೀರಪ್ಪ, ಮಾಜಿ ಸಹಾಯಕ ಆಡಳಿತಾಧಿಕಾರಿ ಮತ್ತು ಶ್ರೀ ಸಫೀರೂರ್ ರೆಹಮಾನ್, ಮಾಜಿ ದ್ವಿ.ದ.ಸ. ರವರುಗಳು ಮೇಲೆ ಓದಲಾದ (5)ರಂತೆ ಕ್ರಮವಾಗಿ ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿಯ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದ್ದು ಶಿಸ್ತು ಪ್ರಾಧಿಕಾರವು ಹೊರಡಿಸಿರುವ ದಂಡನಾ ಆದೇಶವನ್ನು ಭಾಗಶಃ ಪರಿಷ್ಕರಿಸಲು ನಿರ್ಣಯಿಸಿ, ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಮೇಲೆ ಓದಲಾದ (6)ರ ಪತ್ರದಲ್ಲಿ ಪಡೆಯಲಾಗಿರುತ್ತದೆ. ಅದರನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 28 ಪೊಸಿಲಿ 2009 ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 26(ಎ) ಪ್ರಕಾರ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೋರೆವೀರಪ್ಪ, ಸಹಾಯಕ ಆಡಳಿತಾಧಿಕಾರಿ ಮತ್ತು ಶ್ರೀ ಸಫೀರೂರ್ ರೆಹಮಾನ್, ದ್ವಿತೀಯ ದರ್ಜೆ ಸಹಾಯಕ ಇವರುಗಳಿಗೆ ಈ ಕೆಳಗಿನಂತೆ ದಂಡನೆ ವಿಧಿಸಿ ಸರ್ಕಾರವು ಆದೇಶಿಸಿದೆ.

1) ಇವರಿಬ್ಬರನ್ನು ವಜಾಗೊಳಿಸಿರುವ ದಂಡನೆಯನ್ನು ಮಾರ್ಪಡಿಸಿ ಸೇವೆಗೆ ಪುನರ್ ಸ್ಥಾಪಿಸಿದೆ.
2) ಇವರಿಬ್ಬರ ವೇತನವನ್ನು ಅವರ ವೇತನ ಶ್ರೇಣಿಯ ಕನಿಷ್ಠ ಹಂತಕ್ಕೆ ಅಂದರೆ ಶಾಖಾಧೀಕ್ಷಕ ವೇತನ ಶ್ರೇಣಿ ರೂ.10000-18150ರಲ್ಲಿ ರೂ.10000ಕ್ಕೆ ನಿಗದಿ ಮಾಡುವುದು ಮತ್ತು ದ್ವಿತೀಯ ದರ್ಜೆ ಸಹಾಯಕರ ವೇತನ ಶ್ರೇಣಿ ರೂ.5800-10500ರಲ್ಲಿ ರೂ.5800ಕ್ಕೆ ವೇತನ ಶ್ರೇಣಿಯ ಕನಿಷ್ಟ ಹಂತಕ್ಕೆ ಒಂದು ವರ್ಷ ಅವಧಿಗೆ ಇಳಿಸಿದೆ.
3) ದಂಡನಾವಧಿ ಮುಗಿದ ನಂತರ ಇವರ ವೇತನವನ್ನು ಕಾಲ್ಪನಿಕವಾಗಿ ನಿಗದಿಪಡಿಸಿದೆ. ಅವರು ಯಾವುದೇ ವೇತನ ಬಾಕಿಗೆ ಅರ್ಹರಿರುವುದಿಲ್ಲ.
4) ಮಾರ್ಪಡಿಸಿದ ದಂಡನೆಯು ಇವರು ಸೇವೆಗೆ ಪುನರ್ ಸ್ಥಾಪನೆಗೊಂಡು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಜಾರಿಗೆ ಬರುತ್ತದೆ.
5) ಇವರನ್ನು ಸೇವೆಯಿಂದ ವಜಾಗೊಳಿಸಿದ ದಿನಾಂಕದಿಂದ ಕರ್ತವ್ಯಕ್ಕೆ ಹಾಜರಾಗುವವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿ (Dies-non) ಎಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2514

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ರಾಮನಗರ ತಾಲೂಕು, ಕಸಬಾ ಹೋಬಳಿ, ವಡೇರಹಳ್ಳಿ ಸರ್ವೆ ನಂ.58ರಲ್ಲಿ 5-39 ಎಕರೆ ಜಮೀನನ್ನು ರೇಷ್ಮೆ ಕೈಗಾರಿಕಾ ಕೇಂದ್ರ, ಸಿಲ್ಕ್ ರೀಲರ್ ಕಟ್ಟಡವನ್ನು ನಿರ್ಮಿಸಲು ಭೂಸ್ವಾದೀನಪಡಿಸಿಕೊಂಡು ನ್ಯಾಯಾಲಯದ ಆದೇಶದಂತೆ ಹೆಚ್ಚುವರಿ ಪರಿಹಾರ ಧನ ಬಿಡುಗಡೆ ಕುರಿತು.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಪತ್ರ ಸಂಖ್ಯೆ: ಎಸ್‌ಪಿಎಸ್‌ಎಫ್/ ರಾಮನಗರ/ ರೇಕೈಕೇಂದ್ರ/ಭೂಸ್ವಾ/52/2008-09, ದಿನಾಂಕ:12-12-2008, 14-05-2009 ಹಾಗೂ 24-10-2009.

**ಪ್ರಸ್ತಾವನೆ:**

ರಾಮನಗರ ತಾಲ್ಲೂಕು, ಕಸಬಾ ಹೋಬಳಿ, ವಡೇರಹಳ್ಳಿ ಗ್ರಾಮದ ಸರ್ವೆ ನಂ.58ರಲ್ಲಿ 5 ಎಕರೆ 39 ಗುಂಟೆ ಜಮೀನು ರೇಷ್ಮೆ ಕೈಗಾರಿಕೆ ಕೇಂದ್ರದ ಸಿಲ್ಕ್ ರೀಲರ್ ಕಟ್ಟಡ ನಿರ್ಮಿಸಲು ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ ಇವರು ಹೊರಡಿಸಿರುವ ಪ್ರಾರಂಭಿಕ ಅಧಿಸೂಚನೆ 4(1) ದಿನಾಂಕ:27–5–1976ರಲ್ಲಿ ಪ್ರಕಟಣೆ ಆಗಿದ್ದು, ಈ ಭೂಸ್ವಾಧೀನದ ವಿರುದ್ಧ ಶ್ರೀ ಗುಂಡಪ್ಪ ಇವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ದಾಖಲಿಸಿದ್ದ ಮೇರೆಗೆ ನ್ಯಾಯಾಲಯವು ಪಂಚನಾಮೆಯನ್ನು ದಿ:16–5–2007ರಲ್ಲಿ ಆಗಿದ್ದ ಪಂಚನಾಮೆಯನ್ನು ರದ್ದುಪಡಿಸಲು ನಿರ್ದೇಶಿಸಿದ್ದ ಮೇರೆಗೆ ದಿನಾಂಕ:31–1–1989ರಂದು ಪುನಃ ಐತೀರ್ಪು ತಯಾರಿಸಲಾಗಿದ್ದು, ಈ ತೀರ್ಪಿನಂತೆ ಆಗಿರುವ ಅವಾರ್ಡ್ ಮೊತ್ತ ರೂ.17,178/– ಗಳಾಗಿರುತ್ತದೆ. ಈ ಐತೀರ್ಪಿನ ವಿರುದ್ಧ ಶ್ರೀ ಗುಂಡಪ್ಪ ಇವರು ಭೂಸ್ವಾಧೀನ ಕಾಯಿದೆ 18ರಡಿ ಹೆಚ್ಚುವರಿ ಪರಿಹಾರ ಕೋರಿ, ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಮನಗರದಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಹೆಚ್ಚುವರಿ ಪರಿಹಾರ ನೀಡಲು ನ್ಯಾಯಾಲಯವು ದಿ:15–12–2007ರಂದು ಆದೇಶ ಹೊರಡಿಸಿದ್ದು, ಈ ಪ್ರಕರಣವು ಎಕ್ಸಿಕ್ಯೂಷನ್ ಸಹ ಆಗಿರುತ್ತದೆ. ಅದರಂತೆ, ನ್ಯಾಯಾಲಯಕ್ಕೆ ಹೆಚ್ಚಿನ ಪರಿಹಾರವನ್ನು ಸಂದಾಯ ಮಾಡಬೇಕಾಗಿರುವುದರಿಂದ ಲೆಕ್ಕಾಚಾರದ ತಃಖ್ತೆಯನ್ನು ತಯಾರಿಸಿ ಕಳುಹಿಸಿ, ನ್ಯಾಯಾಲಯದ ಆದೇಶದಂತೆ ಸಂದಾಯ ಮಾಡಬೇಕಾಗಿದ್ದ ಒಟ್ಟು ಮೊತ್ತ ರೂ.29,61,850/–ಗಳನ್ನು ಬಿಡುಗಡೆ ಮಾಡುವಂತೆ ರಾಮನಗರ ಉಪವಿಭಾಗಾಧಿಕಾರಿಗಳು ಕೋರಿರುವ ಬಗ್ಗೆ ತಿಳಿಸಿ, ಸರ್ವೆ ನಂ.58 ಹಾಗೂ 59ರಲ್ಲಿ ಒಟ್ಟು 10.24ಎಕರೆ ಜಮೀನಿದ್ದು, ಅದರಲ್ಲಿ 2 ಎಕರೆ ಜಮೀನನ್ನು ಆರ್.ಟಿ.ಓ ಕಚೇರಿಗಾಗಿ ಲೋಕೋಪಯೋಗಿ ಇಲಾಖೆಗೆ ನೀಡಲಾಗಿದ್ದು, ಅದಕ್ಕೆ ಪರ್ಯಾಯವಾಗಿ ರಾಮನಗರ ಮಾರುಕಟ್ಟೆಗೆ ಹೊಂದಿಕೊಂಡಂತಿರುವ ಜಮೀನು ಖರೀದಿಸಲು ಅನುವಾಗುವಂತೆ 15ಲಕ್ಷ ಬೆಲೆ ನಿಗದಿಪಡಿಸಲಾಗಿರುತ್ತದೆ. ಉಳಿದಂತೆ 0.20 ಗುಂಟೆ ಜಮೀನನ್ನು ರಸ್ತೆಗಾಗಿ, 6.01 ಎಕರೆ ಜಮೀನನ್ನು ವಿವಿಧ ಇಲಾಖೆಗಳ ಸಂಕೀರ್ಣ ನಿರ್ಮಾಣಕ್ಕಾಗಿ ಲೋಕೋಪಯೋಗಿ ಇಲಾಖೆಗೆ ಹಸ್ತಾಂತರಿಸಲಾಗಿದ್ದು, 2 ಎಕರೆ ಜಮೀನು ಮಾತ್ರ ರೇಷ್ಮೆ ಇಲಾಖೆಯ ವಶದಲ್ಲಿರುವುದಾಗಿ ತಿಳಿಸಿ, ಲೋಕೋಪಯೋಗಿ ಇಲಾಖೆಗೆ ಜಮೀನು ನೀಡುವ ಸಂದರ್ಭದಲ್ಲಿ ಭೂಸ್ವಾಧೀನದ ನಂತರ ಮುಂದೆ ಬರಬಹುದಾದ ಆರ್ಥಿಕ ಹೊರೆಯನ್ನು ಲೋಕೋಪಯೋಗಿ ಇಲಾಖೆಯೇ ಭರಿಸುವ ಷರತ್ತಿಗೊಳಪಟ್ಟು, ಆದೇಶ ನೀಡಿರುವುದರಿಂದ ಸರ್ವೆ ನಂ.58ರ 3.39 ಎಕರೆಗೆ ಹೆಚ್ಚುವರಿ ಪರಿಹಾರವನ್ನು ಲೋಕೋಪಯೋಗಿ ಇಲಾಖೆಯೇ ಭರಿಸಬೇಕಾಗಿದೆಯಾಗಿ ತಿಳಿಸಿ, ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ನಿರ್ಧರಿಸಿದ್ದು, ಆದೇಶವು ಜೆ.ಎಂ.ಎಫ್.ಸಿ, ನ್ಯಾಯಾಲಯದಲ್ಲಿ ಎಕ್ಸಿಕ್ಯೂಷನ್ ಆಗಿದ್ದು, ದಿನಾಂಕ:14–10–2009ರಂದು ಉಪವಿಭಾಗಾಧಿಕಾರಿಗಳ ಕಚೇರಿ ಜಪ್ತಿಯಾಗಿದ್ದು, ಪೀಠೋಪಕರಣಗಳನ್ನು ವಶಕ್ಕೆ ತೆಗೆದುಕೊಂಡಿರುವುದರಿಂದ ಕಚೇರಿ ಕೆಲಸಕ್ಕೆ ತೊಂದರೆಯಾಗುತ್ತದೆ ಎಂದು ಉಪವಿಭಾಗಾಧಿಕಾರಿಗಳು ವರದಿ ಮಾಡಿರುವುದರಿಂದ ರಾಮನಗರ ಉಪವಿಭಾಗಾಧಿಕಾರಿಗಳು ತಯಾರಿಸಿರುವ ದಿ:11–5–2009ರವರೆಗೆ ಲೆಕ್ಕ ತಃಖ್ತೆಯಲ್ಲಿ ಕೋರಿರುವ ಮೊತ್ತ ರೂ.36,31,571/–ಗಳಲ್ಲಿ 2 ಎಕರೆಗಳಿಗೆ ಅನುಗುಣವಾಗಿ ರೂ.12,15,568–20ಗಳನ್ನು ಲೆಕ್ಕ ಶೀರ್ಷಿಕೆ 4851–00–107–1–01 ಕಟ್ಟಡಗಳು ಯೋಜನೆಯಡಿ ಭರಿಸಲು ಮಂಜೂರಾತಿಯನ್ನು ನೀಡುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ: 24–10–2009ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ತಿಳಿಸಿರುವಂತೆ ರಾಮನಗರ ಉಪವಿಭಾಗಾಧಿಕಾರಿಗಳ ಕಚೇರಿ ಜಪ್ತಿಯಾಗಿರುವುದರಿಂದ ನ್ಯಾಯಾಲಯಕ್ಕೆ ಕೂಡಲೇ ಹಣ ಪಾವತಿಸುವುದು ಅನಿವಾರ್ಯವಾಗಿರುವುದರಿಂದ ಅವರು ಕೋರಿರುವಂತೆ ಹಣ ಮಂಜೂರಾತಿಗೆ ಅನುಮೋದನೆ ನೀಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 1 ರೇಯೋವಿ 2009, ಬೆಂಗಳೂರು, ದಿನಾಂಕ: 2ನೇ ನವೆಂಬರ್ 2009**

ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ರಾಮನಗರ ಜಿಲ್ಲೆ, ರಾಮನಗರ ನ್ಯಾಯಾಲಯವು ಎಲ್‌ಎಸಿ ಸಂಖ್ಯೆ: 78/2005 ರಲ್ಲಿ ದಿನಾಂಕ:15–12–2007ರಲ್ಲಿ ನೀಡಿರುವ ಆದೇಶನ್ವಯ ರೇಷ್ಮೆ ಇಲಾಖೆಯ ವಶದಲ್ಲಿರುವ 2 ಎಕರೆ ಜಮೀನಿನ ಹೆಚ್ಚುವರಿ ಪರಿಹಾರ ಬಾಬ್ತು ರೂ.12,15,568–20 ರೂ.ಗಳನ್ನು ಲೆಕ್ಕ ಶೀರ್ಷಿಕೆ 4851–00–107–1–01 ಕಟ್ಟಡಗಳು ಯೋಜನೆಯಡಿ ಭರಿಸುವುದಕ್ಕೆ ಮಂಜೂರಾತಿ ನೀಡಿದೆ.

ರಾಮನಗರ ಉಪವಿಭಾಗಾಧಿಕಾರಿಗಳ ಕಚೇರಿ ಜಪ್ತಿಯಾಗಿದ್ದು, ನ್ಯಾಯಾಲಯಕ್ಕೆ ಕೂಡಲೇ ಹಣ ಪಾವತಿಸುವುದು ಅನಿವಾರ್ಯವಾಗಿರುವುದರಿಂದ ವಿಶೇಷ ಪ್ರಕರಣವೆಂದು ಪರಿಗಣಿಸಿ ಆರ್ಥಿಕ ಇಲಾಖೆಯ ಘಟನೋತ್ತರ ಅನುಮೋದನೆ/ಸಹಮತಿಯನ್ನು ನಿರೀಕ್ಷಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2522

**ಭಾರತಿ ಆರ್.ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ತುಮಕೂರು ಜಿಲ್ಲೆ, ತುಮಕೂರು ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪರಿಷ್ಕೃತ–II)ಗೆ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡುವ ಕುರಿತು

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ನಅಇ 64 ಬೆಂರೂಪ್ರಾ 2006, ದಿ:11–07–07

2) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ತುಮಕೂರು ಇವರ ಪತ್ರ ಸಂಖ್ಯೆ: ತುನಪ್ರಾ/ನಯೋಸ/ ಮಯೋ/01/2007–08/580, ದಿ:30–07–09

3) ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ಇವರ ಏಕ ಕಡತ ಸಂಖ್ಯೆ: ನಯೋ (21) ಜಂನಿ (ಬೆಂವಿ)/ಮಯೋ (ಪ– II)/ತಾತ್ಕಾಲಿಕ/ತುಮಕೂರು/2009–10, ದಿ:17–09–09

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ತುಮಕೂರು ನಗರಕ್ಕೆ ಸ್ಥಳೀಯ ಯೋಜನಾ ಪ್ರದೇಶವನ್ನು ಹಾಲಿ ಇದ್ದ 75 ಚ.ಕಿ.ಮೀ ಗಳಿಂದ 310 ಚ.ಕಿ.ಮೀ.ಗಳಿಂದ ವಿಸ್ತರಿಸಿ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶವನ್ನು ಘೋಷಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರರವರು ತುಮಕೂರು ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–II)ಯ ನಕ್ಷೆ ಹಾಗೂ ವರದಿಯನ್ನು ತಯಾರಿಸಿ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ ಶಿಫಾರಸ್ಸಿನೊಂದಿಗೆ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಚೇರಿಯ ಏಕ ಕಡತದಲ್ಲಿ, ತುಮಕೂರು ನಗರದ ಜನಸಂಖ್ಯೆಯು 2031ಕ್ಕೆ 9,50,000ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆ (ಪರಿಷ್ಕೃತ–II) ತಯಾರಿಸಲಾಗಿದೆ. ತುಮಕೂರು ನಗರದ ಸ್ಥಳೀಯ ಯೋಜನಾ ಪ್ರದೇಶದ 310 ಚ.ಕಿ.ಮೀ.ವಿಸ್ತೀರ್ಣದಲ್ಲಿ 12997.40 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾ ಯೋಜನೆ (ಪರಿಷ್ಕೃತ–II)ಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ ತುಮಕೂರು ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಪ್ರದೇಶದಲ್ಲಿ ವಸತಿಗಾಗಿ 6302.62 ಹೆಕ್ಟೇರ್ (ಶೇ.53.5) ವಾಣಿಜ್ಯಕ್ಕಾಗಿ 423.87 ಹೆಕ್ಟೇರ್ (ಶೇ.3.60) ಕೈಗಾರಿಕೆಗಾಗಿ 1012.04 ಹೆಕ್ಟೇರ್ (ಶೇ.8.50) ಸಾರ್ವಜನಿಕರ ಅರೆ ಸಾರ್ವಜನಿಕಕ್ಕೆ 922.47 ಹೆಕ್ಟೇರ್ (ಶೇ.7.83) ಉದ್ಯಾನವನ ಮತ್ತು ಬಯಲು ಜಾಗಗಳಿಗೆ 1041.06 ಹೆಕ್ಟೇರ್ (ಶೇ.8.84) ನಾಗರೀಕ ಸೌಲಭ್ಯಕ್ಕಾಗಿ 45.62 ಹೆಕ್ಟೇರ್(ಶೇ.0.39) ಹಾಗೂ ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 2033.06 ಹೆಕ್ಟೇರ್(ಶೇ.17.26) ಕಾಯ್ದಿರಿಸಿದ್ದು, ಜಲಾವೃತ ಪ್ರದೇಶವಾಗಿ 692.66 ಹೆಕ್ಟೇರ್, ಕೃಷಿ ಜಮೀನು 215.06 ಹೆಕ್ಟೇರ್ ಮತ್ತು ಭಾಗಾಯ್ತು ಜಮೀನು 308.94 ಹೆಕ್ಟೇರ್ ಒಳಗೊಂಡಂತೆ ಒಟ್ಟು 12997.40 ಹೆಕ್ಟೇರ್‌ಗಳು ನಗರೀಕರಣದ ಎಲ್ಲೆಯೆಂದು ನಿಗದಿಪಡಿಸಲಾಗಿದೆ. ಮಹಾ ಯೋಜನೆ (ಪರಿಷ್ಕೃತ–II)ಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1)ರನ್ವಯ ಸರ್ಕಾರದ ತಾತ್ಕಾಲಿಕ ಅಂತಿಮ ಅನುಮೋದನೆ ನೀಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 270 ಬೆಂರೂಪ್ರಾ 2009, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ತುಮಕೂರು ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ– II) 2031ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(1)ರನ್ವಯ ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

"ತುಮಕೂರು ನಗರದ ಉಪ್ಪಾರಹಳ್ಳಿ ಗ್ರಾಮದ ಸ.ನಂ.23ರಲ್ಲಿ ಪ್ರಸ್ತಾಪಿಸಿರುವ ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕಾಗಿ ಕಾಯ್ದಿರಿಸಿದ ಪ್ರದೇಶವನ್ನು ವಸತಿ ಉಪಯೋಗಕ್ಕೆ ಬದಲಾಯಿಸಿ, ತಿದ್ದುಪಡಿಯೊಂದಿಗೆ ಅಂತಿಮ ಅನುಮೋದನೆಗೆ ಸಲ್ಲಿಸುವುದು"

ಮಹಾ ಯೋಜನೆ (ಪರಿಷ್ಕೃತ–II)ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2523

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ಸಹಾಯಕ ಸರ್ಕಾರಿ ಅಭಿಯೋಜಕರು–ವಾ–ಸಹಾಯಕ ಸರ್ಕಾರಿ ವಕೀಲರ ಆಯ್ಕೆ ಸಮಿತಿಯ ಖರ್ಚುಗಳನ್ನು ಭರಿಸಲು ಅನುದಾವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್:ಲೆಕ್ಕ–1:174–2009–2010; ದಿನಾಂಕ:09–09–2009

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಖಾಲಿ ಇರುವ 144 ಸಹಾಯಕ ಸರ್ಕಾರಿ ಅಭಿಯೋಜಕರು–ವಾ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಕ್ರಮಕೈಗೊಳ್ಳಲಾಗಿದ್ದು, ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸಿದ್ದು, ಅರ್ಜಿಗಳ ಮಾರಾಟ ಮತ್ತು ಅರ್ಜಿ ಜೊತೆ ಪಾವತಿಸಬೇಕಾದ ಶುಲ್ಕ, ಈ ಎರಡರಿಂದ ಒಟ್ಟು ರೂ.37,29,975 ಬಂದಿದ್ದು, ಅದನ್ನು ಸರ್ಕಾರದ ಲೆಕ್ಕಕ್ಕೆ ಜಮಾ ಮಾಡಲಾಗಿದೆಯೆಂದು ಆಯ್ಕೆ ಸಮಿತಿಯ ಕೆಲಸ ಕಾರ್ಯಗಳಿಗೆ ಅಗತ್ಯವಿರುವ ರೂ.36.00ಲಕ್ಷ ಹಣದ ಅವಶ್ಯಕತೆ ಬಗ್ಗೆ ವೆಚ್ಚ ವಿವರಗಳನ್ನು ಸಲ್ಲಿಸಿರುತ್ತಾರೆ. ಸದರಿ ಹಣವನ್ನು 2014–00–114–0–02–51 ಸಾಮಾನ್ಯ ವೆಚ್ಚಗಳು ಲೆಕ್ಕ ಶೀರ್ಷಿಕೆಯಲ್ಲಿ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಒಇ 405 ಪಿಪಿಇ 2009, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಆಯ್ಕೆ ಸಮಿತಿಗೆ ಸಂಬಂಧಿಸಿದಂತೆ ಆಡಳಿತ ಇಲಾಖೆಯು ಅಸ್ತಿತ್ವದಲ್ಲಿರುವ ನಿಯಮಗಳನ್ವಯ ಹಾಗೂ ಕರ್ನಾಟಕ ಸಂಗ್ರಹಣಾ ಪಾರದರ್ಶಕ ಅಧಿನಿಯಮ (ಕೆ.ಟಿ.ಪಿ.ಪಿ.ಆಕ್ಟ್) ಗಳನ್ವಯ ಸೂಕ್ತ ಕ್ರಮಕೈಗೊಂಡು ಅಂಚೆ, ಮುದ್ರಣ ಇತ್ಯಾದಿ ಸಂಭವನೀಯ ವೆಚ್ಚಗಳಿಗೆ ರೂ.25,49,000 (ಇಪ್ಪತ್ತೈದು ಲಕ್ಷ ನಲವತ್ತೊಂಬತ್ತು ಸಾವಿರ ರೂಪಾಯಿಗಳು) ಗಳನ್ನು "2014–00–114–0–02–051 ಸಾಮಾನ್ಯ ವೆಚ್ಚಗಳು' ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಆದರೆ, ಆರ್ಥಿಕ ಇಲಾಖೆಯವರು ಸ್ಪಷ್ಟಪಡಿಸಿರುವಂತೆ ಈ ಕೆಳಗೆ ನಮೂದಿಸಿದ ವೆಚ್ಚಗಳನ್ನು ಭರಿಸಲು ಸರ್ಕಾರದ ಅನುಮತಿಯನ್ನು ನಿರಾಕರಿಸಲಾಗಿದೆ.

| | | |
|---|---|---|
| 1) | ಆಯ್ಕೆ ಸಮಿತಿಯ ಕಚೇರಿಯಲ್ಲಿನ ಸಿಬ್ಬಂದಿ ವರ್ಗದವರಿಗೆ ಸಂಭಾವನೆ | ರೂ.1,71,000.00 |
| 2) | ಆಯ್ಕೆ ಸಮಿತಿಯ ಕೆಲಸಗಳನ್ನು ದೈನಂದಿನ ಕೆಲಸಗಳ ಜೊತೆಗೆ ಹೆಚ್ಚುವರಿಯಾಗಿ ನಿರ್ವಹಿಸುವುದಕ್ಕೆ ಇಲಾಖೆಯ ಅಧಿಕಾರಿ/ಸಿಬ್ಬಂಧಿಯವರಿಗೆ ಪಾವತಿ ಮಾಡಲು | ರೂ.2,00,000.00 |
| 3) | ಆಯ್ಕೆ ಸಮಿತಿಯ ಕೆಲಸಗಳಿಗೆ ಉಪಯೋಗಿಸುವ ಕಾರ್‌ಗೆ ಇಂಧನ ಹಾಗೂ ಕಾರ್‌ನ ಚಾಲಕರುಗಳಿಗೆ ಸಂಭಾವನೆ | ರೂ.80,000.00 |
| 4) | ಆಯ್ಕೆ ಸಮಿತಿಯ ಕಾರ್ಯದರ್ಶಿಯವರ ಸಂಭಾವನೆ | ರೂ.1,00,000.00 |
| 5) | ಆಯ್ಕೆ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರುಗಳಿಗೆ ಗೌರವ ಸಂಭಾವನೆ | ರೂ.5,00,000.00 |
| **ಸಂಭಾವನೆಯ ಒಟ್ಟು ವೆಚ್ಚ** | | **ರೂ.10,51,000.00** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಆಇ 768 ವೆಚ್ಚ–11/2009 ದಿನಾಂಕ:31.09.2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ.ಸಿದ್ದಪ್ಪ**

ಪಿ.ಆರ್. 2524

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗ)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಸಚಿವಾಲಯ**

**ತಿದ್ದೋಲೆ ಸಂಖ್ಯೆ: ಕಸಂವಾಪ್ರ 72 ಕೆಓಎಲ್ 2009, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2009**

ದಿನಾಂಕ:27.10.2009ರ ಸರ್ಕಾರಿ ಆದೇಶ ಸಂಖ್ಯೆ:ಕಸಂವಾಪ್ರ 55 ಕೆಓಎಲ್ 2009ರ ಆದೇಶ ಭಾಗದ 3ನೇ ಸಾಲಿನಲ್ಲಿ **"ಗುತ್ತಿಗೆ ಆಧಾರದ ಮೇಲೆ ನಿಯಮಾನುಸಾರ ನೇಮಿಸಲು"** ಎಂಬ ಪದಗಳಿಗೆ ಬದಲಾಗಿ **"ಹೊರಗುತ್ತಿಗೆ ಮೇಲೆ ನಿಯಮಗಳನ್ನು ಪಾಲಿಸಿ ಭರ್ತಿ ಮಾಡಲು"** ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2696

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ವಸತಿ ಸಚಿವಾಲಯ

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1999, ದಿನಾಂಕ:10.05.2000.
2) ಸರ್ಕಾರದ ಆದೇಶ ಸಂ.ವಇ/18/ಹೆಚ್‌ಎಎಸ್/2008, ದಿನಾಂಕ:16.09.2009

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ 62 ಹೆಚ್‌ಎಎಸ್ 2009, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2009**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ಪಟ್ಟಣ ಆಶ್ರಯ ಸಮಿತಿಗೆ ಶ್ರೀ ಗೋಪಾಲಕೃಷ್ಣ ಬಿನ್ ವೆಂಕಟರಮಣಪ್ಪ, ಪಾರ್ವತಿಪುರ, ಹೊಸಕೋಟೆ ಇವರನ್ನು ಅಧ್ಯಕ್ಷರ ಹುದ್ದೆಗೆ ಹಾಗೂ ಈ ಕೆಳಕಂಡವರನ್ನು ಸಮಿತಿಯ ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ಎ.ಮಂಜುನಾಥ್ ಬಿನ್ ಲೇ ಅಂಜಿನಪ್ಪ ಕೋಟೆ, ಹೊಸಕೋಟೆ ಟೌನ್ | ಹಿಂದುಳಿದ ವರ್ಗ |
| 2. | ಶ್ರೀ ಪಿ.ರಾಮಚಂದ್ರ ಬಿನ್ ಜೆ.ವಿ.ತೆಳ್ಳಶೆಟ್ಟಪ್ಪ, ಶರಾಬ್ ಮುನಿಶಾಮಪ್ಪ ಬಡಾವಣೆ, ಹಳೇ ಮದ್ರಾಸ್ ರಸ್ತೆ, ರಿಲೆಯನ್ಸ್ ಪೆಟ್ರೋಲ್ ಬಂಕ್ ಹಿಂಭಾಗ, ಹೊಸಕೋಟೆ ಟೌನ್, | ಸಾಮಾನ್ಯ |
| 3. | ಶ್ರೀಮತಿ ರೇಖಾ ಕೋಂ ವೀರೇಂದ್ರಸಿಂಗ್, ರಜಪೂತಪೇಟೆ, ಹೊಸಕೋಟೆ ಟೌನ್, | ಅಲ್ಪಸಂಖ್ಯಾತರು (ಮಹಿಳೆ) |
| 4. | ಶ್ರೀ ನಾಗರಾಜು ಬಿನ್ ಅಂಜಿನಪ್ಪ, ಓಂಕಾರ ನಿಲಯ, 5–ಎ ಕ್ರಾಸ್, ಎಂ.ವಿ.ಬಡಾವಣೆ, ಹೊಸಕೋಟೆ ಟೌನ್ | ಪರಿಶಿಷ್ಟ ಪಂಗಡ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2526

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ವಿ. ಪದ್ಮನಾಭ ಕೇದಿಲಾಯ, ವಿಚಾರಣಾಧಿಕಾರಿಗಳು, ಹಾಗೂ ಜಿಲ್ಲಾ ಸೆಷನ್ಸ್ (ನಿವೃತ್ತ) ಇವರಿಗೆ ವಿಚಾರಣಾ ವರದಿ ಸಲ್ಲಿಸಿರುವುದಕ್ಕಾಗಿ ಗೌರವಧನ ಮತ್ತು ವಾಹನ ಭತ್ಯೆ ಮಂಜೂರಾತಿ ಬಗ್ಗೆ

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 133 ಎಸ್‌ಇಎನ್ 2004, ದಿನಾಂಕ: 29.12.2007
2) ಶ್ರೀ ವಿ.ಪದ್ಮನಾಭ ಕೇದಿಲಾಯ ನಿವೃತ್ತ ನ್ಯಾಯಾಧೀಶರ ಪತ್ರ, ದಿನಾಂಕ:30.09.2009.

**ಪ್ರಸ್ತಾವನೆ:**

ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್, ಇವರು 22.10.2001ರಿಂದ 26.02.2003ರವರೆಗೆ ಮುಖ್ಯ ಇಂಜಿನಿಯರ್ ಆಗಿ ನೀರಾವರಿ ದಕ್ಷಿಣ ವಲಯ ಮೈಸೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಹುಲ್ಲಹಳ್ಳಿ ಕಾಲುವೆ 0 ಕಿ.ಮಿ. ರಿಂದ 72 ಕಿ.ಮೀವರೆಗೆ ನಡೆದ ವಿವಿಧ ಕಾಮಗಾರಿಗಳು ಕಳಪೆ ಕಾಮಗಾರಿಗಳಾಗಿದ್ದು, ಈ ಕಾಮಗಾರಿಗಳಲ್ಲಿ ಅಕ್ರಮ ಆರೋಪಕ್ಕಾಗಿ ಶ್ರೀ ಹೆಚ್. ಚಂದ್ರಶೇಖರಯ್ಯ ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಕೆಸಿಎಸ್ಆರ್ ನಿಯಮ 214ರ ರನ್ವಯ ಮೇಲೆ (1)ರಲ್ಲಿ ಓದಲಾದ ದಿನಾಂಕ:29.12.2007ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ನಿವೃತ್ತ ನ್ಯಾಯಾಧೀಶರಾದ ಶ್ರೀ ವಿ.ಪದ್ಮನಾಭ ಕೆದಿಲಾಯ ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಈ ಪ್ರಕರಣದ ಇಲಾಖಾ ಮುಗಿಸಿ ಮೇಲೆ (2)ರಲ್ಲಿ ಓದಲಾದ ದಿನಾಂಕ: 30.9.2009ರ ಪತ್ರದಲ್ಲಿ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸದರಿ ವಿಚಾರಣಾಧಿಕಾರಿಯವರಿಗೆ ನಿಯಮಗಳ ಪ್ರಕಾರ ಗೌರವ ಧನ ಮತ್ತು ವಾಹನ ಭತ್ಯೆಯನ್ನು ಮಂಜೂರು ಮಾಡಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 133ಎಸ್‌ಇಎನ್ 2004 ಬೆಂಗಳೂರು, ದಿನಾಂಕ: 6ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ವಿ.ಪದ್ಮನಾಭ ಕೆದಿಲಾಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ವಿಚಾರಣಾ ವರದಿ ಸಲ್ಲಿಸಿರುವ ಕಾರಣ ಇವರಿಗೆ ಸರ್ಕಾರಿ ಆದೇಶ ಸಂಖ್ಯೆ, ಸಿಆಸುಇ 22 ಸೇಇವಿ 2007,

ದಿನಾಂಕ:11.04.2008ರನ್ವಯ, ರೂ.8000/–ಗಳ ಗೌರವಧನ ಹಾಗೂ ರೂ.1500/–ವಾಹನ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು ಆಯವ್ಯಯದ ಲೆಕ್ಕಶೀರ್ಷಿಕೆ 2052/ಸಚಿವಾಲಯ, ಸಾಮಾನ್ಯ ಸೇವೆಗಳು–090 ಸಚಿವಾಲಯ–01 ಕರ್ನಾಟಕ ಸರ್ಕಾರ ಸಚಿವಾಲಯ–051, ಸಾಮಾನ್ಯ ವೆಚ್ಚಗಳು ಇಲ್ಲಿ ಭರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಪಿ.ಆರ್. 2528 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಆಕುಕ 242 ಎಂಎಂಸಿ 2009, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2009**

ಸರ್ಕಾರದ ಆದೇಶ ಸಂಖ್ಯೆ: ಆಕುಕ 395 ಎಂಎಂಸಿ 2007 ದಿನಾಂಕ 28.02.2009 ಅನುಬಂಧ–1ರಲ್ಲಿ ಕ್ರಮಸಂ:1ರ

| ಕ್ರ. ಸಂ. | ಹೆಸರು | ಪದನಾಮ | ವಿದ್ಯಾರ್ಹತೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ |
|---|---|---|---|---|---|
| 01 | ಡಾ: ಜೆ.ಬಿ.ಶಾಂತಲ | ಹಿರಿಯ ತಜ್ಞರು | ಎಂಡಿ (ಮೈಕ್ರೋ) | 25.09.1969 | 22.04.2001 |

**(ನಮೂದುಗಳನ್ನು)**

| ಕ್ರ. ಸಂ. | ಹೆಸರು | ಪದನಾಮ | ವಿದ್ಯಾರ್ಹತೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ |
|---|---|---|---|---|---|
| 01 | ಡಾ: ಜೆ.ಬಿ.ಶಾಂತಲ | ಹಿರಿಯ ತಜ್ಞರು | ಎಂಡಿ (ಮೈಕ್ರೋ) | 25.12.1974 | 12.03.2004 |

ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಶ್ರೀರಾಮರೆಡ್ಡಿ**
ಪಿ.ಆರ್. 2529 ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

## HIGHER EDUCATION SECRETARIAT

**Sub:** Issue of terms and conditions of appointment of Dr. Hanumanna Nayak Dorai, Special Officer for establishment of Karnataka State Dr. Gangubai Hangal Music and Performing Arts University.

**Read:** 1) Government Notification No. ED 52 UMV 2007, dated 13.02.08.

2) Letter dated 14.02.2009 from Dr. Hanumanna Nayak Dorai, Special Officer for establishment of Karnataka State Dr. Gangubai Hangal Music and Performing Arts University

**Preamble:**

A scale-less post of Special Officer has been created for establishment of Karnataka State Dr. Gangubai Hangal Music and Performing Arts University and Dr. Hanumanna Nayak Dorai, Professor and Head of the Department of Music and Dance and Dean of fine Arts Faculty, Kannada University, Hampi has been appointed as Special Officer vide Government Notification dated 13.02.2008 read (1) above. The Officer has assumend charge of the said post on 14.02.2008. It is necessary to issue terms and conditions of his appointement. Hence the following orders.

**Order No. ED 108 URC 2009, Bangalore, Dated: 2nd November 2009**

Government are pleasede to issue the terms and conditions of appointment of Dr. Hanumanna Nayak Dorai, Professor and Head of th Department of Music and Dance and Dean of Fine Arts Faculty, Kannada Univerisity Hampi as the Special Officer for establishment of Karnataka State Dr. Gangubai Hangal Music and Performing Arts University and Mysore which are as appended to this order.

This issues with the concurrence of the Fince Department vide Nos. FD 1220 Exp-8/2009, dated: 14.09.2009 and FD 1418 Exp-8/09 dated 07.10.2009.

By orde and in the name of the Governor of Karnataka

**B.S. JAPALI**

Deputy Secretary to Government

Higher Education Department (Universities)

**APPENDIX TO G.O.NO.ED 108 URC 2009, DATED 02-11-2009**

TERMS AND CONDITIONS OF DEPUTATION OF Dr. HANUMANNA NAYAK DORAI, PROFESSOR AND HEAD OF THE DEPARTMENT OF MUSIC AND DANCE AND DEAN OF FINE ARTS AND FACULTY, KANNADA UNIVERSITY, HAMPI AS THE SPECIAL OFFICER FOR ESTABLISHMENT OF KARNATAKA STATE DR. GANGUBAI HANAGAL MUSIC AND PERFORMING UNIVERSITY AT MYSORE.

1. **PERIOD:** The period of service an Dr. Hanumanna Nayak Dorai, Professor and Head of the Department of Music and Dance and Dean of Fine Arts Faculty, Kannada Unversity, Hampi is for the period of two yuears or as desited by the Higher Education Department with the Office of the Special Officer for the establishment of Karnataka State Dr. Gangubai Hangal Music and Performing University at Mysore or unitil further orders whichever is earlier.
2. **COMMENCEMENT AND END OF APPOINTMENT:** The Appointment shall commece with effect from 14.02.2008 and ends on the date he relinquishes his office.
3. **PAY AND OTHER ALLOWANCES:** During the period of appointment, Dr. Hanumanna Nayak Dorai, shall be entitled to pay including DA/HRA/CCA admissible to him in his parent organization. He shall not be entitled to any other deputation or foreign service allowance.
4. **LEAVE RULES:** He will be governed by the leave rules as applicable to him in his parent organization.
5. **LEAVE SALARY CONTRIBUTION:** The Karnataka State Dr. Gangubai Hanagal Music and Performing University shall pay Leave Salary Contribution at the rate of 11% of Pay
6. **PENSION CONTRIBUTION:** Pension contribution shall be paid by Karnataka State Dr. Gangubai Hangal Music and Performing Arts University at the provisional rate at 12.5% on the total basic pay received during the period of deputation as per statute.
7. **MEDICAL CONCESSION :** The official shall be entitled to the medical attendance as per the Karnataka Government Servants (Medical Attendeance) Rules. 1963.
8. He shall perform the functions of Special Officer and attend to all work entrusted to him from time to time by the Government of Karnataka.
9. He shall perform his duties diligently and he shall maintion strict secrecy in respect of official information which he comes to know in the course of his duties.
10. He shall be liable to reimburse to Government all the losses which the Government may sustain due to misconduct of any sort on his part.

**B.S. JAPALI**

P.R. 2531

Deputy Secretary to Government

Higher Education Department (Universities)

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ:** ಮೀನುಗಾರಿಕೆ ಯಾಂತ್ರಿಕ ದೋಣಿಗಳ ನಿರ್ಮಾಣಕ್ಕಾಗಿ ಸಾಧ್ಯತಾ ಪ್ರಮಾಣ ಪತ್ರ ನೀಡುವ ವಾರ್ಷಿಕ ಗುರಿಯ ಪರಿಷ್ಕರಣೆ.

**ಓದಲಾಗಿದೆ:** 1) ಆದೇಶ ಸಂಖ್ಯೆ: ಪಸಂಮೀ/114/ಮೀಇಯೋ/2009 ದಿನಾಂಕ:23–06–2009

2) ಪತ್ರ ಸಂಖ್ಯೆ: ಎಂಇಎಫ್/4/2009–10 ದಿನಾಂಕ:14–10–2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ 48 ಅಡಿಗಿಂತ ಹೆಚ್ಚಿನ ಉದ್ದದ ಯಾಂತ್ರಿಕ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪ್ರಮಾಣ ಪತ್ರ ನೀಡುವ ವಾರ್ಷಿಕ ಗುರಿಯನ್ನು ದಕ್ಷಿಣ ಕನ್ನಡ ಜಿಲ್ಲೆಗೆ 15ರಿಂದ 50ಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಮೀನುಗಾರಿಕೆ ನಿರ್ದೇಶಕರ ಪತ್ರದಲ್ಲಿ ಇತ್ತೀಚಿನ ದಿನಗಳಲ್ಲಿ ಕಡಲ ಮೀನುಗಾರಿಕೆಯಲ್ಲಿ ಕರಾವಳಿ ತೀರ ಪ್ರದೇಶದಲ್ಲಿ ದೊರಕುವ ಮೀನಿನ ಪ್ರಮಾಣ ಕಡಿಮೆಯಾಗುತ್ತಿದ್ದು, ಯಾಂತ್ರಿಕ ದೋಣಿಗಳ ಮೀನುಗಾರರು ಆಳ ಸಮುದ್ರ ಮೀನುಗಾರಿಕೆಯತ್ತ ಹೆಚ್ಚಿನ ಗಮನ ಹರಿಸಿದ್ದು, ಈ ಉದ್ದೇಶಕ್ಕೆ ಆಳ ಸಮುದ್ರದಲ್ಲಿ ಮೀನುಗಾರಿಕೆಯನ್ನು ಮಾಡಲು ಸುಸಜ್ಜಿತ ಅರ್ಹ ಹಾಗೂ ದೊಡ್ಡ ಗಾತ್ರದ ದೋಣಿಗಳ ಅವಶ್ಯಕತೆ ಇದ್ದು, ಬಹುದಿನ ಮೀನುಗಾರಿಕೆ (8–12 ದಿನಗಳ ಮೀನುಗಾರಿಕೆ) ಹೆಚ್ಚಾಗುತ್ತಿದ್ದು, ಈ ಉದ್ದೇಶಕ್ಕೆ 'Sea worthy' ಇರುವ ಯಾಂತ್ರಿಕ ದೋಣಿಗಳ ಅವಶ್ಯಕತೆ ಹೆಚ್ಚಾಗಿರುವುದರಿಂದ ಇಂತಹ ದೋಣಿಗಳಲ್ಲಿ ಫಿಶ್ ಹೋಲ್ಡ್, ಐಸ್ ಹೋಲ್ಡ್ ಮತ್ತು ಅಧಿಕ ಪ್ರಮಾಣದ ಡೀಸೆಲ್ ಮತ್ತು ನೀರನ್ನು ಶೇಖರಿಸಿಟ್ಟುಕೊಳ್ಳುವ ವ್ಯವಸ್ಥೆ ಇರಬೇಕಾಗುತ್ತದೆಂದು ದೋಣಿಗಳ ಮಾಲೀಕರು ಆಳ ಸಮುದ್ರ ಮೀನುಗಾರಿಕೆ ಮಾಡಬಲ್ಲ ದೊಡ್ಡ ಗಾತ್ರದ ಬೋಟುಗಳನ್ನು ನಿರ್ಮಿಸಲು ಸಾಧ್ಯತಾ ಪ್ರಮಾಣ ಪತ್ರಗಳನ್ನು ವಿತರಿಸುವಂತೆ ಕೋರಿರುತ್ತಾರೆ.

ಪ್ರಸ್ತುತ ರಾಜ್ಯದಲ್ಲಿರುವ ಯಾಂತ್ರಿಕ ದೋಣಿಗಳ ಸಂಖ್ಯೆ 3124 ಆಗಿದ್ದು, ಕೇಂದ್ರ ಸರ್ಕಾರವು ವಿವಿಧ ರಾಜ್ಯಗಳಲ್ಲಿ ಕಡಲ ಮೀನುಗಾರಿಕೆಗೆ ಬೇಕಾದ ಯಾಂತ್ರಿಕ ದೋಣಿಗಳ ಸಂಖ್ಯೆಯನ್ನು ಪರಾಮರ್ಶಿಸಿ ನಿಗದಿಪಡಿಸಲು ರಚಿತವಾದ ಸಮಿತಿಯೂ ಸಹ ಕರ್ನಾಟಕ ರಾಜ್ಯದಲ್ಲಿ 9ನೇ ಪಂಚವಾರ್ಷಿಕ ಯೋಜನೆ ಅಂತ್ಯದ ವೇಳೆಗೆ ಯಾಂತ್ರಿಕ ದೋಣಿಗಳ ಸಂಖ್ಯೆಯನ್ನು ಗರಿಷ್ಠ 3955ರೊಳಗೆ ಸೀಮಿತಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಿದ್ದು, ಅದರಂತೆ ಕರ್ನಾಟಕ ರಾಜ್ಯದಲ್ಲಿ ದೋಣಿಗಳ ಸಂಖ್ಯೆಯನ್ನು ಹೆಚ್ಚಿಸಬಹುದಾಗಿದ್ದು, 48 ಅಡಿಗಿಂತ ಹೆಚ್ಚಿನ ಉದ್ದದ ಯಾಂತ್ರಿಕ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪ್ರಮಾಣ ಪತ್ರ ನೀಡುವ ವಾರ್ಷಿಕ ಗುರಿಯನ್ನು ದಕ್ಷಿಣ ಕನ್ನಡ ಜಿಲ್ಲೆಗೆ ಪ್ರಸ್ತುತ ಇರುವ ವಾರ್ಷಿಕ ಮಿತಿ 50 ರಿಂದ 100ಕ್ಕೆ ಹೆಚ್ಚಿಸಿ ಪರಿಷ್ಕರಿಸಲು ಕೋರಿರುತ್ತಾರೆ.

ಮೀನುಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಪಸಂಮೀ 208 ಮೀಇಯೋ 2009, ಬೆಂಗಳೂರು, ದಿನಾಂಕ: 4ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, 48 ಅಡಿಗಿಂತ ಹೆಚ್ಚು ಉದ್ದದ ಯಾಂತ್ರಿಕ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪ್ರಮಾಣ ಪತ್ರ ನೀಡುವ ವಾರ್ಷಿಕ ಗುರಿಯನ್ನು ದಕ್ಷಿಣ ಕನ್ನಡ ಜಿಲ್ಲೆಗೆ ಹಾಲಿ ಇರುವ 50ರ ಮಿತಿಯನ್ನು 100ಕ್ಕೆ ಹೆಚ್ಚಿಸಿ ಆದೇಶ ಹೊರಡಿಸಿದೆ.

ಸಾಧ್ಯತಾ ಪ್ರಮಾಣ ಪತ್ರ ನೀಡಲು ರಚಿಸಲಾಗಿರುವ ಸಮಿತಿಯು ಅನುಸರಿಸಬೇಕಾದ ಮಾರ್ಗದರ್ಶನವನ್ನು ಸರ್ಕಾರದ ಆದೇಶ ಸಂಖ್ಯೆ: ಎಹೆಚ್‌ಎಫ್/481/ಎಸ್‌ಎಫ್‌ಎಂ/94 ದಿನಾಂಕ:15–12–1994 ಮತ್ತು ಅದರ ಅನುಬಂಧದಲ್ಲಿ ನೀಡಲಾಗಿದ್ದು, ಅವುಗಳನ್ನು ಚಾಚೂ ತಪ್ಪದೆ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಂ. ರಾಜಣ್ಣ**

ಪಿ.ಆರ್. 2538 ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ನಾರಾಯಣಸ್ವಾಮಿ, ಪಿ.ಎಸ್.ಐ., ಕಾಕತಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ, ಡಿಇ/76/ಉವ/2008 ದಿ:04–09–2008

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು (6)35/2008–09 ಓ.ಬಿ.42/08–09 ದಿನಾಂಕ:14–01–2009

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:31–03–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)5/2009–10 ದಿನಾಂಕ:24–07–2009

**ಪ್ರಸ್ತಾವನೆ:**

ಶ್ರೀ ನಾರಾಯಣಸ್ವಾಮಿ, ಪಿ.ಎಸ್.ಐ, ಸಂಚಾರಿ ಪೊಲೀಸ್ ಠಾಣೆ, ಬೆಳಗಾವಿ, ಇವರು ಕಾಕತಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಘೋರ ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

"ದಿನಾಂಕ: 04–08–2006ರಂದು ಶ್ರೀ ಜೆ.ಎಫ್.ಮುಶಾಪುರಿ, ಪಿ.ಎಸ್.ಐ.(ಕಾಸು) ಎಪಿಎಂಸಿ ಪೊಲೀಸ್ ಠಾಣೆ, ಬೆಳಗಾವಿ, ಇವರು ಜೀಪ್ ಸಂಖ್ಯೆ:ಕೆಎ–22/ಜಿ–244 ನೇದ್ದರಲ್ಲಿ ವಾಹನ ಚಾಲಕ ಸಿ.ಪಿ.ಸಿ–1803 ಎಸ್.ಆರ್.ಮುನ್ನೆಣ್ಣಿ ಇವರೊಂದಿಗೆ ರಾತ್ರಿ ಗಸ್ತು ಕರ್ತವ್ಯದಲ್ಲಿದ್ದಾಗ ರಾತ್ರಿ 12 ಗಂಟೆ ಸುಮಾರಿಗೆ ಕೊಲ್ಲಾಪೂರ ಸರ್ಕಲ್ ಕಡೆಗೆ ಬರುವಾಗ ಬೆಳಗಾವಿಯ ಎಪಿಎಂಸಿ ಠಾಣಾ ಹದ್ದಿಯಲ್ಲಿರುವ ಅತಿಥಿ ಲಾಡ್ಜ್ ಹತ್ತಿರ ಬಂದಾಗ ಅಲ್ಲಿ ಒಂದು ಪೊಲೀಸ್ ಜೀಪ್ ಮತ್ತು ಒಂದು ಪೊಲೀಸ್ ವಜ್ರಾ ಮೋಟಾರ್ ಸೈಕಲ್ ನಿಂತಿದ್ದನ್ನು ಗಮನಿಸಿ ಲಾಡ್ಜಿಂಗ್‌ನಲ್ಲಿ ಏನೋ ಪೊಲೀಸ್ ಕಾರ್ಯಾಚರಣೆ ನಡೆದಿದೆ ಅಂತಾ ಸಂಶಯದಿಂದಾ ಅವರು ಜೀಪ್ ಚಾಲಕನೊಂದಿಗೆ ಲಾಡ್ಜಿಂಗ್‌ನಲ್ಲಿ ಹೋದಾಗ ಅಲ್ಲಿಯ ರೂಮ್ ಬಾಯ್ ಮತ್ತು ಮ್ಯಾನೇಜರ ತಡಬಡಿಸಿ ಓಡಾಡುತ್ತಿದ್ದನ್ನು ಗಮನಿಸಿ ರೂಮ್ ಕಡೆಗೆ ನೋಡಲಾಗಿ ಕೆಲವು ರೂಮ್ ಬೀಗ ಹಾಕಿದ್ದು, ಕೆಲವು ಬಾಗಿಲುಗಳು, ಮುಚ್ಚಿದ್ದವು, ಸದರಿ ರೂಮ್‌ಗಳ ಪೈಕಿ ರೂಮ್ ಸಂಖ್ಯೆ:110 ನೇದ್ದರಲ್ಲಿ ಲೈಟ್ ಇದ್ದ ಕಾರಣ ಸದರಿ ಪಿ.ಎಸ್.ಐ. ರವರು ರೂಮ್ ನಂ.110ರ ಬಾಗಿಲು ಬಡಿದಾಗ ಸ್ವಲ್ಪ ಬಾಗಿಲು ತೆಗೆದಿದ್ದು ಅಪೊಅ ಶ್ರೀ ನಾರಾಯಣಸ್ವಾಮಿ ಪಿ.ಎಸ್.ಐ. ಕಾಕತಿ ಠಾಣೆ, ಸದ್ಯ ಪಿ.ಎಸ್.ಐ. ರಾಷ್ಟ್ರೀಯ ಹೆದ್ದಾರಿ ಪಡೆ, ಬೆಳಗಾವಿರವರಾದ ನೀವು ಬೆತ್ತಲೆಯಾಗಿದ್ದು ಮತ್ತು ಅಪೊಅ ಡಬ್ಲ್ಯೂಪಿಸಿ–962 ಗೀತಾ ಬಿ.ಕನಹಟ್ಟಿ, ಕಾಕತಿ ಠಾಣೆ, ಇವರು ಸದರಿ ರೂಮಿನಲ್ಲಿಯ ಬಾತ್‌ರೂಮ್ ಕಡೆಗೆ ಓಡಿ ಹೋಗಿರುತ್ತಾರೆ ಅಪೊಅ ಶ್ರೀ ನಾರಾಯಣಸ್ವಾಮಿ ಪಿ.ಎಸ್.ಐ. ರವರಾದ ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿ ಡಬ್ಲ್ಯೂಪಿಸಿ–962 ಗೀತಾ ಬಿ.ಕನಹಟ್ಟಿ, ಇವಳೊಂದಿಗೆ ಇಲಾಖೆಗೆ ಕುಂದು ತರುವಂತಹ ಅನೈತಿಕ ಚಟುವಟಿಕೆಯಲ್ಲಿ ತೊಡಗಿ ಘೋರ ಕೃತ್ಯ ಎಸಗಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿರುವಿರಿ"

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿರುವುದಿಲ್ಲವೆಂದು ಸಲ್ಲಿಸಿದ ವರದಿಯನ್ನು ಶಿಸ್ತು ಪ್ರಾಧಿಕಾರ ಒಪ್ಪದೆ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:04–09–08ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮೂರು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ:14–01–09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುವುದು. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 81 ಪೊಸಿಅ 2009 ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಾರಾಯಣಸ್ವಾಮಿ, ಪಿ.ಎಸ್.ಐ, ಸಂಚಾರಿ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2539

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿ.ಪಿ.ಬಾಲಚಂದ್ರ, ಸಿ.ಪಿ.ಸಿ–2103 ಬಜ್ಪೆ ಪೊಲೀಸ್ ಠಾಣೆ, ದಕ್ಷಿಣ ಕನ್ನಡ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಇವರ ಆದೇಶ ಸಂಖ್ಯೆ: ಶಿಕ್ಷಾಪಟ್ಟಿ/52/2008 ದಿ:05–09–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ/3/43/ಪವ/2008 ದಿನಾಂಕ:11–02–2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:29–05–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)24/2009–10 ದಿನಾಂಕ:21–08–2009

**ಪ್ರಸ್ತಾವನೆ:**

ಶ್ರೀ ಸಿ.ಪಿ.ಬಾಲಚಂದ್ರ ಸಿ.ಪಿ.ಸಿ.2103 ಬಜ್ಪೆ ಪೊಲೀಸ್ ಠಾಣೆ, ಇವರು ಕರ್ತವ್ಯದಲ್ಲಿ ದುರ್ನಡತೆ ಹಾಗೂ ನಿರ್ಲಕ್ಷತೆ ತೋರಿಸಿದ ಕಾರಣದ ಮೇಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

> "ದಿನಾಂಕ: 27–05–2008ರಂದು ಮಧ್ಯಾಹ್ನ ಸುಮಾರು 12.30ಗಂಟೆ ವೇಳೆಗೆ ಸಂಜೆ 5.00 ಗಂಟೆಯ ಒಳಗಾಗಿ ಸುಬ್ರಹ್ಮಣ್ಯ ಠಾಣೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡುವಂತೆ ಠಾಣಾ ಪಿ.ಎಸ್.ಐ.ರವರು ರಹದಾರಿ ಪತ್ರ ನೀಡಿದಾಗ ರಹದಾರಿ ಪತ್ರ ಪಡೆಯುವರೇ ನಿರಾಕರಿಸಿ ಕರ್ತವ್ಯಕ್ಕೆ ಗೈರು ಹಾಜರಾಗಿ ಮೇಲಾಧಿಕಾರಿಯವರ ಆದೇಶ ಪಾಲಿಸದೇ ದುರ್ನಡತೆ ಹಾಗೂ ತೀರಾ ಕರ್ತವ್ಯ ನಿರ್ಲಕ್ಷತೆ ತೋರಿಸಿರುವುದು"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷರು, ದಕ್ಷಿಣ ಕನ್ನಡ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:05–09–2008ರ ಆದೇಶದಲ್ಲಿ ಅರ್ಜಿದಾರರಿಗೆ 'ವಾಗ್ದಂಡನೆ'ಯನ್ನು ವಿಧಿಸಿ, ಗೈರುಹಾಜರಾದ ಅವಧಿ ದಿನಾಂಕ: 27–05–08 ರಿಂದ 09–06–2008ರ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ ನಿಯಮ 106(ಎ) ಪ್ರಕಾರ 'ವೇತನ ರಹಿತ' ರಜೆಯೆಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11–02–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುವುದು. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 113 ಪೊಸಿಅ 2009 ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಪಿ.ಬಾಲಚಂದ್ರ ಸಿ.ಪಿ.ಸಿ–2013ಬಜ್ಪೆ ಪೊಲೀಸ್ ಠಾಣೆ, ದಕ್ಷಿಣ ಕನ್ನಡ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2540

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**FOREST, ECOLOGY AND ENVIRONMENT SECRETARIAT**

**Sub:** Constitution of the Executive Committee for State Compensatory Afforestation Fund Management and Planning Authority (State CAMPA) reg.

**Read:** 1) Government Order No. FEE 247 FGL 2002, dated 29-06-2004.

2) Government Order No. FEE 247 FGL 2002,(1) dated 29-06-2004

3) Government Order No. FEE 53 FAP 2007, dated 22-06-2009

4) Letter No. 5-1-/2009-FC, dated 21-07-2009 from the Director General of Forest and Special Secretary to Government of India, Ministry of Environment and Forests. New Delhi with guidelines dated 02-07-2009.

5) Letter No. A(5) GFL, CR 27/07-08 dated 05-09-2009 and 08-09-2009 from the Principal Chief Conservator of Forests, Bangalore.

**Preamble:**

In Government Order read at (1) and (2) above a Steering Committee at the State Level under the Chairmanship of the Chief Secretary to Government and a State Management Committee under the Chairmanship of Principal Chief Conservator of Forests had been Constituted.

In Government Order read at (3) above a Governing Body under the Chairmanship of the Chief Minister and a Executive Committee under the Chairmanship of the Chief Secretary has been Constituted which is required to be modified as Governing Body and Steering Committee as per the New guidelines dated 02-07-2009 of the Ministry of Enviroment and Forests which has been communicated with the letter dated 21-07-2009 read at (4) above.

The Government of India, Ministry of Environment and Forests in its letter dated 21-07-2009 read at (4) above has formulated guidelines dated: 02-07-2009 for establishing State Compensatory Afforestation Fund Management and Planning Authority (State CAMPA) in the States and putting in Place a funding mechanism for enhancing forest and tree cover by utilizing in funds under Compensatory Afforestation and Net present Value, Currently available with the Adhoc CAMPA. The State CAMPA Functions through a Governing Body, Steering Committee and Executive Committee respectively the Principal Chief Conservator of Forests is the Chairperson of the Executive Committee of the State CAMPA needs to Open an account in any of the nationalized banks and Communicate the account details to the adhoc CAMPA in the Ministry of Enviroment and Forests, New Delhi

The Principal Chief Conservator of Forests in his letter dated 05-09-2009 and 08-09-2009 read at (5) above has requested for constituting the Exceutive Committee of the State CAMPA and also nominating two NGOs as per the para No. 15(1) of the guidelines on State Compensatory Afforestation Fund Management and Planning Authority.

1) BAIF Bharathiya Agro Industries Foundation Sharada Nagar, Tiptur Town. Tumkur District

2) MYRADA Mysore Rural Area Development Agency, No.2, Service Road, Domlur Layout, Bangalore 71.

The proposal has been examined in detail. The Government has decided to Constitute a Executive Committee under the Chairmanship of the Principal Chief Conservator of Forests and also nominating the above NGOs. Hence this order.

**Government Order No. FEE 53 FAP 2007(PI), Bangalore, Dated: 25th November 2009**

Government hereby constitute an Executive Committee under the Chairmanship of the Principal Chief Conservalor of Forests Comprising of the following members.

| Sl. No. | Name of the Committee Member | |
|---|---|---|
| 1. | The Principal Chief Conservator of Forests | Chairperson |
| 2. | The Chief Wildifc Warden | Member |
| 3. | The Additional Principal Chief Conservator of Forests (Dvelopment) | Member |
| 4. | The Chief Accounts Officer, Office of the Principal Chief Consvervator of Forests | Member |
| 5. | Bharathiya Agro Industries Foundation, Sharada Nagar, Tiptur Town, Tumkur District. | Member |
| 6. | Mysore Rural Area Development Agency, No.2 Service Road, Domlur Layout, Bangalore 71. | Member |
| 7. | Chief Conservator of Forests (Forest Conservation) and Nodal Officer Office of the Principal Chief Conservator of Forests. | Member Secretary |

The NGOs are Nominated by the State Government for a Period of 2 Years all a time and shall be eligible for re-nomination.

The State Level Executive Committee Shall

(i) Take all Steps for giving effect to the State CAMPA and overarching Objectives and core Principles, in accordance with rules and procedures approved Steering Committee and the approved APO.

(ii) Prepare the APO of the State for Various activities Submit it to the Steering Committee before end of December for each financial year and obtain the Steering Committees concurrence for release of funds, while giving break-up of the proposed activities and estimated costs,

(iii) Supervise the works being implemented in the State out of the funds released from the State CAMPA.

(iv) be responsible for proper auditing of both receipt and expenditure of funds.

(v) develop the Code for maintenance of the account at the implementing agency level.

(vi) Submit reports to the Steering Committee for review consideration and.

(vii) prepare Annual Report by end-june for each financial year.

By order and in the name of the Governor of Karnataka

**P.R. KALAVATHI**

Under Secreatry to Government,

Forest, Ecology and Environment Department.

P.R. 2683

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ (KLIDC Ltd.) ದ ಹೆಸರನ್ನು "ಡಾ. ಬಾಬು ಜಗಜೀವನರಾಂ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ" ಎಂದು ಬದಲಿಸುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರವು ರಾಜ್ಯದಲ್ಲಿನ ಚರ್ಮೋದ್ಯಮದ ಬೆಳವಣಿಗೆ ಮತ್ತು ಪರಿಶಿಷ್ಟ ಜಾತಿಗೆ ಸೇರಿದ ಚರ್ಮ ಕುಶಲ ಕರ್ಮಿಗಳ ಆರ್ಥಿಕ ಮತ್ತು ಸಾಮಾಜಿಕ ಶ್ರೇಯೋಭಿವೃದ್ಧಿಯ ಮೂಲ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ಕರ್ನಾಟಕ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತವನ್ನು 1976ರಲ್ಲಿ ಸ್ಥಾಪಿಸಿತು. ನಿಗಮವು ಚರ್ಮೋತ್ಪನ್ನಗಳನ್ನು **"ಲಿಡ್ಕರ್"** ಬ್ರಾಂಡ್ ನೇಮ್ ಅಡಿ ಮಾರಾಟ ಮಾಡುತ್ತಿದೆ.

ಪ್ರಸಕ್ತ 2009–10ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ ಸಂಸ್ಥೆಯನ್ನು "ಜಗಜೀವನರಾಂ ಅಭಿವೃದ್ಧಿ ನಿಗಮ ನಿಯಮಿತ" ಎಂದು ಪುನರ್ ನಾಮಕರಣ ಮಾಡಿ ಕರ್ನಾಟಕ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತವನ್ನು ಅವಲಂಬಿಸಿರುವವರಿಗೆ ತಾಂತ್ರಿಕ ಸಹಾಯ ಹಾಗೂ ಮಾರುಕಟ್ಟೆ ಅವಕಾಶವನ್ನು ಕಲ್ಪಿಸಲು ರೂ. 5.00 ಕೋಟಿ ನೀಡಲಾಗುವುದೆಂದು ಘೋಷಿಸಿದ್ದ ಹಿನ್ನೆಲೆಯಲ್ಲಿ ಕರ್ನಾಟಕ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತವನ್ನು ಪೂರ್ಣ ಪ್ರಮಾಣದಲ್ಲಿ ಪುನಃಶ್ಚೇತನಗೊಳಿಸಲು ಹಾಗೂ ಚರ್ಮ ಕುಶಲ ಕರ್ಮಿಗಳಿಗೆ ನಿರಂತರ ಉದ್ಯೋಗವನ್ನು ಒದಗಿಸಲು 2009–10ನೇ ಸಾಲಿನ ಆಯವ್ಯಯದಲ್ಲಿ ರೂ. 500.00 ಲಕ್ಷಗಳನ್ನು ನಿಗಧಿಪಡಿಸಲಾಗಿದೆ ಹಾಗೂ ಮುಂದುವರೆದು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 27 ಸಪ್ರಕೈ 2009, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2009**

**ಯೂನಿಕ್ ಕ್ರಮ ಸಂಖ್ಯೆ: 65/2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ (KLIDC Ltd.) ದ ಹೆಸರನ್ನು **"ಡಾ. ಬಾಬು ಜಗಜೀವನರಾಂ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ"** ಎಂದು ಬದಲಿಸಿ ತಕ್ಷಣದಿಂದ ಜಾರಿಗೆ ತರಲು ಆದೇಶಿಸಿದೆ.

ಈ ಸಂಬಂಧದಲ್ಲಿ ನಿಯಮಗಳನ್ವಯ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು.

"ಡಾ. ಬಾಬು ಜಗಜೀವನರಾಂ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ" ವು ಉತ್ಪಾದಿಸುವ ಉತ್ಪನ್ನಗಳನ್ನು **"ಲಿಡ್ಕರ್"** ಬ್ರಾಂಡ್ ನೇಮ್‌ನಲ್ಲಿಯೇ ಮಾರಾಟ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2721

**ಬಿ.ಆರ್. ನಾಗಭೂಷಣ**

ಪೀಠಾಧಿಕಾರಿ (ಸಪ್ರಕೈ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಸಹಕಾರಿ ಸಂಸ್ಥೆಗಳ ಮೂಲಕ ಶೇ. 6ರ ಬಡ್ಡಿ ದರದಲ್ಲಿ ಮೂರ್ತೆದಾರರಿಗೆ ಸಾಲ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಒ 91 ಸಿಎಲ್‌ಎಸ್ 2008. ದಿನಾಂಕ: 04–11–2008.

2) ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ: ಓಟಿಎಸ್/294.ಹೆಚ್‌ಓಟಿ/2009–10 ದಿನಾಂಕ:14.09.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಮೂರ್ತೆದಾರರ ಸಹಕಾರಿ ಸಂಸ್ಥೆಗಳ ಮೂಲಕ ದಿನಾಂಕ: 01–04–2008 ರಿಂದ ಶೇ. 6ರ ಬಡ್ಡಿ ದರದಲ್ಲಿ ಮೂರ್ತೆದಾರರಿಗೆ ಸಾಲ ನೀಡಲು ಕೆಲವು ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿರುತ್ತದೆ. ಸದರಿ ಆದೇಶದ 5ನೇ ಷರತ್ತಿನಲ್ಲಿ ಮೂರ್ತೆದಾರರ ಸಹಕಾರಿ ಸಂಸ್ಥೆಗಳಿಗೆ ಸರ್ಕಾರವು ಭರಿಸಿಕೊಡುವ ಬಡ್ಡಿ ಸಹಾಯಧನದ ಪ್ರಮಾಣವನ್ನು ಪ್ರತ್ಯೇಕವಾಗಿ ನಿಗದಿಪಡಿಸಲಾಗುವುದು ಎಂದು ತಿಳಿಸಲಾಗಿದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಮೂರ್ತೆದಾರರ ಸಹಕಾರ ಸಂಘಗಳು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಮಂಗಳೂರು ಇಲ್ಲಿಂದ ಸಾಲ ಪಡೆದುಕೊಂಡಲ್ಲಿ ತಗಲುವ ವೆಚ್ಚದ ವಿವರಗಳನ್ನು ಸಲ್ಲಿಸಿದ್ದಾರೆ. ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಮೂರ್ತೆದಾರರ ಸಹಕಾರಿ ಸಂಸ್ಥೆಗಳಿಗೆ ಸರ್ಕಾರವು ಭರಿಸಿಕೊಡುವ ಬಡ್ಡಿ ಸಹಾಯಧನದ ಪ್ರಮಾಣವನ್ನು ಶೇ. 6.5 ರಷ್ಟು ನಿಗದಿಪಡಿಸಲು ತೀರ್ಮಾನಿಸಲಾಗಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 91 ಸಿಎಲ್‌ಎಸ್ 2008, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೂರ್ತೆದಾರರ ಸಹಕಾರಿ ಸಂಸ್ಥೆಗಳು ದಿನಾಂಕ:01–04–2008 ರಿಂದ ಮೂರ್ತೆದಾರರಿಗೆ ಶೇ.6ರ ಬಡ್ಡಿ ದರದಲ್ಲಿ ಸಾಲ ನೀಡಲು ಅನುವಾಗುವಂತೆ ಸರ್ಕಾರವು ಭರಿಸಿಕೊಡುವ ಬಡ್ಡಿ ಸಹಾಯಧನದ ಪ್ರಮಾಣವನ್ನು ಶೇ 6.5 ರಷ್ಟು ಎಂದು ನಿಗದಿಪಡಿಸಲು ಹಾಗೂ ಈ ಸಹಾಯಧನದ ಪ್ರಮಾಣವನ್ನು ಪ್ರತಿ ಫಲಾನುಭವಿಗೆ ರೂ. 50.000/– ಸಾಲಕ್ಕೆ ಮಿತಿಗೊಳಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (1)ರ ಆದೇಶದ ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/293/ ವೆಚ್ಚ–2/ 09 ದಿನಾಂಕ: 15–10–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 2722

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಜಿ.ವಿ.ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ ಮರು ವಿಚಾರಣೆಗೆ ವಿಚಾರಣಾಧಿಕಾರಿಯವರನ್ನು ಬದಲಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: 34 ಎಸ್‌ಇಎನ್ 2005. ದಿನಾಂಕ: 03–03–2009.
2) ಶ್ರೀ ಎಂ.ವಿ. ಶೀಲವಂತ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿ ಇವರ ಮನವಿ ದಿನಾಂಕ: 02–07–2009.

**ಪ್ರಸ್ತಾವನೆ:**

ಶ್ರೀ ಜಿ.ವಿ. ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಅವರು 1998–99ರ ಅವಧಿಯಲ್ಲಿ ಬೆಳಗಾವಿಯಲ್ಲಿ ಉಪ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, 1998–99ನೇ ಸಾಲಿನ ವಿಶೇಷ ಶಿಕ್ಷಕರುಗಳ ನೇಮಕಾತಿಗಾಗಿ ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆಯಾದ ನಂತರ ಪಟ್ಟಿಯಲ್ಲಿ ಆಯ್ಕೆಯಾಗದ 5 ಮಂದಿ ಅಭ್ಯರ್ಥಿಗಳಿಂದ ಮೂಲ ಅರ್ಜಿಯೊಡನೆ ಸಲ್ಲಿಸದಿದ್ದ ಅಂಕಪಟ್ಟಿ ಹಾಗೂ ಮೀಸಲಾತಿ ಪ್ರಮಾಣ ಪತ್ರಗಳನ್ನು ಪಡೆದು ನಿಯಮಗಳಿಗೆ ವಿರುದ್ಧವಾಗಿ ಅಂತಿಮ ಆಯ್ಕೆ ಪಟ್ಟಿಯಲ್ಲಿ ನೇಮಕ ಮಾಡಿದ, ನಿಗಧಿ ಪಡಿಸಿದ ವಿಶ್ವವಿದ್ಯಾಲಯಗಳ ಪದವಿಯನ್ನು ಹೊಂದದಿರುವ ಇಬ್ಬರು ಅಭ್ಯರ್ಥಿಗಳನ್ನು ಮೀಸಲಾತಿ ಗುಂಪಿನಲ್ಲಿ ಸಂಗೀತ ಶಿಕ್ಷಕರನ್ನಾಗಿ ನೇಮಕ ಮಾಡಿದ, ವಿಶೇಷ ಶಿಕ್ಷಕರುಗಳಾಗಿ ನೇಮಕಾತಿ ಆಗದೆ 6 ಮಂದಿ ಅಭ್ಯರ್ಥಿಗಳಿಗೆ ಕೌನ್ಸಲಿಂಗ್ ಮೂಲಕ ಈಗಾಗಲೇ ನೀಡಲಾಗಿದ್ದ ಸ್ಥಳ ನಿಯುಕ್ತಿ ಆದೇಶವನ್ನು ಬೇಕಾಬಿಟ್ಟಿ ಮಾರ್ಪಾಡು ಮಾಡಿದ 3 ಆರೋಪಗಳಿಗಾಗಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆದು ವಿಚಾರಣಾಧಿಕಾರಿಯವರಾದ ಶ್ರೀ ಎಂ.ಡಿ. ಶೀಲವಂತ ನಿವೃತ್ತ ನ್ಯಾಯಾಧೀಶರು ಸಲ್ಲಿಸಿದ ವಿಚಾರಣಾ ವರದಿಯನ್ನು ಪರಿಶೀಲಿಸಿದ ನಂತರ ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಒಪ್ಪಿಕೊಳ್ಳದೆ ಮೇಲೆ (1)ರಲ್ಲಿ ಓದಲಾದ ದಿನಾಂಕ:03–03–2009ರಂದು ಸರ್ಕಾರಿ ಆದೇಶದಲ್ಲಿ ಪ್ರಕರಣವನ್ನು ಮರು ವಿಚಾರಣೆಗಾಗಿ ವಿಚಾರಣಾಧಿಕಾರಿಯವರಿಗೆ ಹಿಂತಿರುಗಿಸಲಾಗಿತ್ತು. ಶ್ರೀ ಎಂ.ಡಿ. ಶೀಲವಂತೆ ನಿವೃತ್ತ ನ್ಯಾಯದೀಶರು ಮೇಲೆ (2) ರಲ್ಲಿ ಓದಲಾದ ದಿನಾಂಕ: 02–07–2009ರ ಪತ್ರದಲ್ಲಿ ವೃದ್ಧಾಪ್ಯ ಹಾಗೂ ಹದಗೆಟ್ಟ ಆರೋಗ್ಯ ಪರಿಸ್ಥಿತಿಯಿಂದಾಗಿ ಈ ವಿಚಾರಣೆಯನ್ನು ಕೈಗೆತ್ತಿಕೊಳ್ಳಲು ಸಾಧ್ಯವಿಲ್ಲವೆಂದು ತಿಳಿಸಿ ಪ್ರಕರಣವನ್ನು ಬೇರೆಯವರಿಗೆ ವಹಿಸಲು ಕೋರಿದ್ದಾರೆ. ಈ ಅಂಶವನ್ನು ಪರಿಶೀಲಿಸಿದ ಸರ್ಕಾರವು ಮರು ವಿಚಾರಣೆ ನಡೆಸುವ ಸಲುವಾಗಿ ಬದಲಿ ವಿಚಾರಣಾಧಿಕಾರಿಯವರನ್ನು ನೇಮಿಸಲು ಪ್ರಸ್ತಾಪಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2009**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ಎರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಪ್ರಕರಣದ ಮರು ವಿಚಾರಣೆ ನಡೆಸಲು ಪ್ರಾದೇಶಿಕ ಆಯುಕ್ತರು, ಬೆಳಗಾವಿ ಜಿಲ್ಲೆ ಬೆಳಗಾವಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ಅವರು ಮಂಡನಾಧಿಕಾರಿಯಾಗಿ ಮುಂದುವರೆಯುತ್ತಾರೆ. ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ವಿಚಾರಣೆ ನಡೆಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–3)

ಪಿ.ಆರ್. 2724

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಸೇಇವಿ 2008, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2009**

**ವಿಷಯ:** ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 06 ಸೇಇವಿ 2008 ದಿನಾಂಕ: 29.04.2008 ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ,

ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ಅಮಾನತ್ತನ್ನು ರದ್ದುಪಡಿಸಿ ಅವರನ್ನು ಮತ್ತೆ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ತೀರ್ಮಾನಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ/ಶಿಸ್ತಿನ ಕ್ರಮವನ್ನು ಬಾಕಿ ಇಟ್ಟು, ಅವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಅವರನ್ನು ಈ ಮೂಲಕ ಸೇವೆಗೆ ತೆಗೆದುಕೊಳ್ಳುತ್ತದೆ.

ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಸೂಕ್ತ ಹುದ್ದೆಗೆ ನಿಯುಕ್ತಿಗೊಳಿಸಲು ಸರ್ಕಾರದ ಜಂಟಿ ಕಾರ್ಯದರ್ಶಿ ಸಿಆಸುಇ (ಆಡಳಿತ) ಇವರು ಕ್ರಮಕೈಗೊಳ್ಳುವುದು ಹಾಗೂ ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಇವರಿಗೆ ಮುಂದಿನ ಸ್ಥಳನಿಯುಕ್ತಿಗಾಗಿ ಅಧೀನ ಕಾರ್ಯದರ್ಶಿ, ಸಿಆಸುಇ (ಸಿಬ್ಬಂದಿ) ಇಲ್ಲಿ ಹಾಜರಾಗುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 2725

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–3)

**ವಿಷಯ:** ಮಾನ್ಯ ಸಚಿವರುಗಳ ಅಧಿಕೃತ ನಿವಾಸ/ಕಛೇರಿಗಳಿಗೆ ನೂತನ ಮಾದರಿಯ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಉಪಕರಣಗಳನ್ನು ಖರೀದಿಸಿ ಅಳವಡಿಸಿರುವ ವೆಚ್ಚ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:**
1) ಮಾನ್ಯ ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 28–08–2008.
2) ಮಾನ್ಯ ಸಹಕಾರ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 04–07–2008.
3) ಮುಖ್ಯ ಮಂತ್ರಿಗಳ ಪ್ರತಿಕಾ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 08–07–2008.
4) ಮಾನ್ಯ ಉನ್ನತ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 19–06–2008.
5) ಮಾನ್ಯ ಮೀನುಗಾರಿಕೆ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 17–06–2008.
6) ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರ ವಿಶೇಷ ಕರ್ತವ್ಯಾಧಿಕಾರಿಯವರ ಟಿಪ್ಪಣಿ ದಿನಾಂಕ: 28–08–2008.
7) ಮಾನ್ಯ ಜವಳಿ ಮತ್ತು ಯುವಜನ ಸೇವೆ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ:25–08–2008.
8) ಮಾನ್ಯ ಮಂತ್ರಿಗಳ ಸಂಸದೀಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ:25–08–2008.
9) ಮಾನ್ಯ ಕಂದಾಯ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 05–09–2008.
10) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 28–01–2009.
11) ಮಾನ್ಯ ಲೋಕೋಪಯೋಗಿ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ:22–12–2009.
12) ಶ್ರೀ ಸಿ.ಸಿ. ಪಾಟೀಲ್, ಮುಖ್ಯ ಮಂತ್ರಿಯವರ ಸಂಸದೀಯ ಕಾರ್ಯದರ್ಶಿ ಇವರ ಟಿಪ್ಪಣಿ ದಿನಾಂಕ: 26–02–2009.
13) ಮಾನ್ಯ ಕಾರ್ಮಿಕ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 19–03–2009.
14) ಮಾನ್ಯ ಮುಖ್ಯ ಮಂತ್ರಿಯವರ ಆರ್ಥಿಕ ಸಲಹೆಗಾರರ ಆಪ್ತ ಸಹಾಯಕರ ಟಿಪ್ಪಣಿ ದಿ: 08–04–09
15) ಅಪರ ಮುಖ್ಯ ಕಾರ್ಯದರ್ಶಿಗಳ (ನಿವಾಸ) ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿ:16–04–2009.
16) ಅಪರ ಮುಖ್ಯ ಕಾರ್ಯದರ್ಶಿಗಳ (ಕಛೇರಿ) ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿ:20–04–2009.

17) ಮಾನ್ಯ ಕೃಷಿ ಸಚಿವರ ಕಛೇರಿ ವಿಶೇಷ ಕರ್ತವ್ಯಾಧಿಕಾರಿಯವರ ಟಿಪ್ಪಣಿ ದಿನಾಂಕ: 25–05–2008.
18) ಮಾನ್ಯ ವಸತಿ ಮತ್ತು ಮುಜರಾಯಿ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ:03–07–2009.
19) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 10–07–2009.
20) ಮಾನ್ಯ ಸಕ್ಕರೆ ಮತ್ತು ಕೃಷಿ ಮಾರುಕಟ್ಟೆ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿ:07–03–2009.
21) ಮಾನ್ಯ ಹಜ್ ಮತ್ತು ವಕ್ಫ್ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 11–03–2009.
22) ಮುಖ್ಯ ಮಂತ್ರಿಗಳ ಕಾನೂನು ಸಲಹೆಗಾರರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿ: 06–04–09.
23) ಮಾನ್ಯ ಪೌರಾಡಳಿತ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 17–08–09.
24) ಮಾನ್ಯ ತೋಟಗಾರಿಕೆ ಹಾಗೂ ಬಂಧೀಖಾನೆ ಸಚಿವರ ವಿಶೇಷ ಕರ್ತವ್ಯಾಧಿಕಾರಿಯವರ ಟಿಪ್ಪಣಿ ದಿನಾಂಕ: 15–07–2009.
25) ಮಾನ್ಯ ಗೃಹ ಸಚಿವರ (ಅಧಿಕೃತ ನಿವಾಸ ಅನುಗ್ರಹ) ಆಪ್ತ ಕಾರ್ಯದರ್ಶಿಯವರ ಪತ್ರ ದಿನಾಂಕ:05–10–2009.
26) ಟೆಂಡರ್ ಅಧಿಸೂಚನೆ ಸಂಖ್ಯೆ: ಸಿಆಸುಇ 273 ಡಿಟಿಎನ್ 2008 ದಿನಾಂಕ: 12–12–08.
27) ಪತ್ರ ಸಂಖ್ಯೆ: ಸಿಆಸುಇ 273 ಡಿಟಿಎನ್ 2008 ದಿನಾಂಕ: 19–02–09.
28) ಮೆ: ಸ್ವಿಸ್ ಮಾರ್ಕೆಟಿಂಗ್ ಕಂ., ಬೆಂಗಳೂರು ಸಂಸ್ಥೆಯ ಬಿಲ್ ಸಂಖ್ಯೆ: 435 ದಿನಾಂಕ: 19–09–09.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಿಂದ (25) ರವರೆಗಿನ ಟಿಪ್ಪಣಿಗಳಲ್ಲಿ ಸಚಿವರುಗಳ ಕಚೇರಿ ಮತ್ತು ನಿವಾಸಕ್ಕೆ ಕೀ–ಟೆಲಿಫೋನ್ ಅಳವಡಿಸುವಂತೆ ಸಚಿವರುಗಳ ಆಪ್ತ ಕಾರ್ಯದರ್ಶಿಗಳು ಕೋರಿದ್ದರು. ಮೇಲೆ ಓದಲಾದ ಕ್ರಮ ಸಂಖ್ಯೆ (26) ರಲ್ಲಿನ ಟೆಂಡರ್ ಅಧಿಸೂಚನೆಯಲ್ಲಿ ಮಾನ್ಯ ಸಚಿವರುಗಳ ಅಧಿಕೃತ ನಿವಾಸ ಮತ್ತು ಕಛೇರಿಗಳಲ್ಲಿರುವ ನೇರ ದೂರವಾಣಿಗಳಿಗೆ 3 ಕೀ ಟೆಲಿಫೋನ್‌ಗಳು ಮತ್ತು 1 ಪುಶ್ ಬಟನ್ ದೂರವಾಣಿ ಉಪಕರಣ ಈ ರೀತಿ ನಾಲ್ಕು ವಿಸ್ತರಣೆಗಳ ಒಟ್ಟು 25 ಆಧುನಿಕ ಮಾದರಿಯ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಗಳನ್ನು ಖರೀದಿಸಿ ಅಳವಡಿಸುವ ಸಂಬಂಧ ಅಧಿಕೃತ ಮಾರಾಟಗಾರರಿಂದ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಿ ಟೆಂಡರ್ ಪ್ರಕಟಣೆ ನೀಡಲಾಗಿತ್ತು. ಟೆಂಡರ್ ಪ್ರಕಟಣೆಗೆ ಪ್ರತಿಕ್ರಯಿಸಿ ಎರಡು ಸಂಸ್ಥೆಗಳು ಟೆಂಡರ್ ಸಲ್ಲಿಸಿದ್ದು ಈ 02 ಸಂಸ್ಥೆಗಳ ಟೆಂಡರ್‌ಗಳನ್ನು ನಿಯಮಾನುಸಾರ ಪರಿಶೀಲಿಸಲಾಯಿತು. ಈ ಎರಡೂ ಸಂಸ್ಥೆಗಳಲ್ಲಿ ಮೆ: ಸ್ವಿಸ್ ಮಾರ್ಕೆಟಿಂಗ್ ಕಂ., ಬೆಂಗಳೂರು ಸಂಸ್ಥೆಯು 3 ಕೀ ಟೆಲಿಫೋನ್‌ಗಳು ಮತ್ತು 1 ಪುಶ್ ಬಟನ್ ದೂರವಾಣಿ ಉಪಕರಣ ಈ ರೀತಿ ನಾಲ್ಕು ವಿಸ್ತರಣೆಗಳ ಒಟ್ಟು 25 ಆಧುನಿಕ ಮಾದರಿಯ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಗಳನ್ನು ಅತಿ ಕಡಿಮೆ ದರ ಅಂದರೆ ರೂ. 5,27,750.00 (ಎಲ್ಲಾ ತೆರಿಗೆ ಸೇರಿ) ಮೊತ್ತವನ್ನು ನಮೂದಿಸಿರುತ್ತದೆ ಹಾಗೂ ಕೇಬಲ್ ಮತ್ತು ಕೇಸಿಂಗ್‌ನೊಂದಿಗೆ ಅಳವಡಿಕೆ ವೆಚ್ಚ ಪ್ರತಿ ಮೀಟರ್‌ಗೆ ರೂ. 14/– ನಮೂದಿಸಿರುತ್ತದೆ. ಅದರಂತೆ 25 ಸಚಿವರುಗಳ ಅಧಿಕೃತ ನಿವಾಸ ಹಾಗೂ ಕಛೇರಿಗಳಿಗೆ ಅತ್ಯಾಧುನಿಕ ಮಾದರಿಯ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಹೊಸ ದೂರವಾಣಿ ಉಪಕರಣಗಳನ್ನು ಒಟ್ಟು ರೂ. 5,27,750,00 (ತೆರಿಗೆ ಸೇರಿ) ವೆಚ್ಚದಲ್ಲಿ ಹಾಗೂ ಕೇಬಲ್ ಮತ್ತು ಕೇಸಿಂಗ್ ವೆಚ್ಚ ಪ್ರತಿ ಮೀಟರ್‌ಗೆ ರೂ. 14/– ವೆಚ್ಚದಲ್ಲಿ ಖರೀದಿಸಿ ಅಳವಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (27)ರ ಪತ್ರದಲ್ಲಿ ಸದರಿ ಸಂಸ್ಥೆಯನ್ನು ಕೋರಲಾಗಿತ್ತು. ಅದರಂತೆ ಈ ಸಂಸ್ಥೆಯು ಮೇಲ್ಕಂಡ 25 ಸಚಿವರುಗಳ ಪೈಕಿ 24 ಸಚಿವರುಗಳ ಅಧಿಕೃತ ನಿವಾಸ ಮತ್ತು ಕಛೇರಿಗಳಿಗೆ ಹೊಸ ಪ್ಯಾನಾಸೋನಿಕ್ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಗಳನ್ನು ಅಳವಡಿಸಿದ ಹಾಗೂ ಒಂದು ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯ ಉಪಕರಣವನ್ನು ತುರ್ತು ಹಂಚಿಕೆಗಾಗಿ ಕಾಯ್ದಿರಿಸಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (28) ರಲ್ಲಿರುವ ಬಿಲ್ಲಿನಲ್ಲಿ ಒಟ್ಟು 25 ಪ್ಯಾನಾಸೋನಿಕ್ ಕೀ–ಟೆಲಿಫೋನ್ ಉಪಕರಣದ ಮೊತ್ತ ರೂ. 5,27,750,00 ಗಳನ್ನು ಹಾಗೂ 24 ಸಚಿವರ ಅಧಿಕೃತ ನಿವಾಸ/ಕಛೇರಿಗಳಿಗೆ ಅಳವಡಿಸಿದ ಕೇಬಲ್ ಮತ್ತು ಕೇಸಿಂಗ್ ವೆಚ್ಚ ರೂ. 1.97,036–00ಗಳನ್ನು ಸೇರಿ ಒಟ್ಟು ಮೊತ್ತ ರೂ. 7,24,536–00ಗಳನ್ನು ಪಾವತಿಗಾಗಿ ಸಲ್ಲಿಸಿದೆ. ಇದನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 273 ಡಿಟಿಎನ್ 2008, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿನ ವಿವರಣೆಯನ್ವಯ ಮಾನ್ಯ ಸಚಿವರುಗಳ ಅಧಿಕೃತ ನಿವಾಸ/ಕಛೇರಿಗಳಿಗೆ ಅಳವಡಿಸಿದ ಸಲುವಾಗಿ ಖರೀದಿಸಿರುವ ಒಟ್ಟು 25 ಆಧುನಿಕ ಮಾದರಿಯ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಗಳ ಒಟ್ಟು ವೆಚ್ಚ ರೂ. 5,27,500,00 (ರೂ. ಐದು ಲಕ್ಷ ಇಪ್ಪತ್ತೇಳು ಸಾವಿರದ ಐನ್ನೂರು ಮಾತ್ರ) (ತೆರಿಗೆ ಸೇರಿ) ಹಾಗೂ 24 ಸಚಿವರ ನಿವಾಸ/ಕಛೇರಿಯಲ್ಲಿ ಅಳವಡಿಸಿರುವ ಕೇಬಲ್ ಮತ್ತು ಕೇಸಿಂಗ್ ವೆಚ್ಚ ರೂ. 1.97,036–00 (ರೂ. ಒಂದು ಲಕ್ಷ ತೊಂಭತ್ತೇಳು ಸಾವಿರದ ಮೂವತ್ತಾರು ಮಾತ್ರ)ಗಳನ್ನು ಸೇರಿ ಒಟ್ಟು ಮೊತ್ತ ರೂ. 7,24,536–00 (ರೂ. ಏಳು ಲಕ್ಷ ಇಪ್ಪತ್ತನಾಲ್ಕು ಸಾವಿರದ

ಐದು ನೂರ ಮೂವತ್ತಾರು ಮಾತ್ರ) ಗಳನ್ನು ಮೆ: ಸ್ವಿಸ್ ಮಾರ್ಕೆಟಿಂಗ್ ಕಂ., ನಂ. 277/14, ಪೋಸ್ಟ್ ಆಫೀಸ್ ಎದುರು 10ನೇ ಕ್ರಾಸ್, ವಿಲ್ಸನ್ ಗಾರ್ಡನ್, ಬೆಂಗಳೂರು–27 ಸಂಸ್ಥೆಗೆ ಪಾವತಿ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕಶೀರ್ಷಿಕೆ "2013–ಮಂತ್ರಿಮಂಡಲ–800–ಇತರೆ ವೆಚ್ಚಗಳು–051–ಸಾಮಾನ್ಯ ವೆಚ್ಚಗಳು" ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ1 ಟಿಎಫ್‌ಪಿ 1996, ದಿನಾಂಕ: 10–07–1996ರಲ್ಲಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ಮಂಜುನಾಥ್**

ಪಿ.ಆರ್. 2726 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ:** ಆರ್.ಐ.ಡಿ.ಎಫ್–13 ಯೋಜನೆಯಡಿ ಮತ್ತು 4202 ಅಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಡಿ 172 ಯೋಸಕಾ: 2008 ಬೆಂಗಳೂರು, ದಿನಾಂಕ: 30–12–2008 (ಸ್ವೀಮರ /141 (ಯುನಿಕ್) 2007, ದಿನಾಂಕ: 31–07–2007)

2) ಸರ್ಕಾರಿ ಆದೇಶ ಸಂಖ್ಯೆ: ಇಡಿ 172 ಯೋಸಕಾ: 2008:2008 ಬೆಂಗಳೂರು, ದಿನಾಂಕ:09–01–2009 (ಸ್ವೀಮರ /ಇಡಿ4: (ಯುನಿಕ್) 2009, ದಿನಾಂಕ: 09–01–2009)

3) ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಶಿಇ 30 ಯೋಜನೆ 2008–09 ದಿನಾಂಕ: 06–07–2009 ಮತ್ತು 10–09–2009.

**ಪ್ರಸ್ತಾವನೆ:**

ಮೇಲೆ (1) ಮತ್ತು (2) ರಲ್ಲಿ ಸರ್ಕಾರದ ಆದೇಶದಲ್ಲಿ ಆರ್. ಐ.ಡಿ.ಎಫ್–13 ಅಡಿ ಹಾಗೂ 4202 ಅಡಿ 2008–09ನೇ ಸಾಲಿಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣ ಮಾಡಲು ಅನುದಾನ ಹಂಚಿಕೆ ಮಾಡಿ ಸದರಿ ಕಾಮಗಾರಿಗಳನ್ನು ಕರ್ನಾಟಕ ಗೃಹ ನಿರ್ಮಾಣ ಮಂಡಳಿ, ಬೆಂಗಳೂರು ಮತ್ತು ಲೋಕೋಪಯೋಗಿ ಇಲಾಖೆ ಇವರಿಗೆ ಕಾರ್ಯಕ್ರಮ ಅನುಷ್ಠಾನಗೊಳಿಸಲು ಅನುಮತಿ ನೀಡಲಾಗಿದೆ.

ಓದಲಾದ (3)ರ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಈ ಕೆಳಕಾಣಿಸಿದ 05 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಅಂದಾಜು ಮೊತ್ತ | 2008–09 ಒದಗಿಸಿರುವ ಅನುದಾನ |
|---|---|---|---|
| 01 | ಗೌರಿಬಿದನೂರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 75.00 | 31.20 |
| 02 | ವಿರಾಜಪೇಟೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 75.00 | 31.20 |
| 03 | ಗಂಡಸಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 20.00 | 13.50 |
| 04 | ಸಾವಳಗಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 50.00 | 25.00 |
| 05 | ಪಾಂಡವಪುರ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 135.00 | 55.80 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 268 ಯೋಯೋಕ 2009, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2009**

ಆರ್.ಐ.ಡಿ.ಎಫ್. 13 ಅಡಿ ಈ ಕೆಳಕಾಣಿಸಿದ 05 ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ಕಾಮಗಾರಿಗಳಿಗೆ ಅವುಗಳ ಮುಂದೆ ತೋರಿಸಿರುವ ಅಂದಾಜು ಮೊತ್ತಕ್ಕೆ ಕೆಲವು ಷರತ್ತುಗಳನ್ನು ವಿಧಿಸಿ ಆಡಳಿತಾತ್ಮಕ ಅನುಮೋದನೆ ನೀಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಅಂದಾಜು ಮೊತ್ತ | 2008–09 ಒದಗಿಸಿರುವ ಅನುದಾನ |
|---|---|---|---|
| 01 | ಗೌರಿಬಿದನೂರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 75.00 | 31.20 |
| 02 | ವಿರಾಜಪೇಟೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 75.00 | 31.20 |
| 03 | ಗಂಡಸಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 20.00 | 13.50 |
| 04 | ಸಾವಳಗಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 50.00 | 25.00 |
| 05 | ಪಾಂಡವಪುರ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಟ್ಟಡ ನಿರ್ಮಾಣ | 135.00 | 55.80 |

**ಷರತ್ತುಗಳು**

- ಸದರಿ ಕಾಮಗಾರಿಗಳನ್ನು ಈಗಾಗಲೇ ನಿಗದಿಯಾಗಿರುವ ಆಯವ್ಯಯದ ಮಿತಿಯಲ್ಲಿಯೇ ಪೂರ್ಣಗೊಳಿಸಲು ಸೂಚಿಸಿದೆ. ನಬಾರ್ಡ್ ಕಾಮಗಾರಿಗಳಿಗೆ ನಕ್ಷೆ ಬದಲಾಯಿಸಬೇಕಾದಲ್ಲಿ ನಬಾರ್ಡ್ ನಿಗದಿಪಡಿಸಿದ ಅಂದಾಜಿನಲ್ಲಿಯೇ ಸಲ್ಲಿಸಿ ನಬಾರ್ಡ್ ಅನುಮತಿ ಪಡೆಯತಕ್ಕದ್ದು.
- ಸದರಿ ಕಾಮಗಾರಿಗೆ 2008–09ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಬಳಸಿಕೊಂಡು ಕೂಡಲೇ ಕಾಮಗಾರಿಯನ್ನು ಪ್ರಾರಂಭಿಸಲು ಕ್ರಮವಹಿಸುವಂತೆ ಸೂಚಿಸುವುದು.
- ಕಟ್ಟಡ ನಿರ್ಮಾಣದ ಗುಣಮಟ್ಟದ ಬಗ್ಗೆ ನಿಗಾ ವಹಿಸಲು ಸಂಬಂಧಿಸಿದ ಕಾಲೇಜುಗಳ ಪ್ರಾಂಶುಪಾಲರಿಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.
- ಕೇಂದ್ರ ಕಛೇರಿಯಿಂದ ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಕಾಮಗಾರಿ ಅಭಿವೃದ್ಧಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.
- ಕಟ್ಟಡ ನಿರ್ಮಾಣ ಕಾಮಗಾರಿಯನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
- ಕಟ್ಟಡವನ್ನು ಪೂರ್ಣಗೊಳಿಸಿ ಕಾಲೇಜಿಗೆ ಹಸ್ತಾಂತರಿಸಿದ ನಂತರ ಸಂಬಂಧಿಸಿದ ಕಾಲೇಜಿನ ಪ್ರಾಂಶುಪಾಲರು ಪ್ರಮಾಣ ಪತ್ರವನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಅವರಿಗೆ ಸೂಚನೆ ನೀಡುವುದು.
- ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್ ವರದಿಯಲ್ಲಿ ನಮೂದಿಸತಕ್ಕದ್ದು.
- ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡಲು ಸೂಚಿಸಿದೆ.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 2830 ಐಎಫ್ (ಬಿ&ಎ) 2009 ದಿನಾಂಕ: 21–11–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ಪಿ.ಆರ್. 2728 ವಿಶೇಷಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ. (ಯೋಜನೆ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಟಿ.ಎಂ. ಮುನಿಯಪ್ಪ ಪಿ.ಸಿ.–389, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ 29/ಡಿಇ/ರೋಲ್–7/2007 ದಿ: 01–12–2007

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್. ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ ಅಪೀಲು /16/07–08 ದಿ: 23–05–2008

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 22–08–08

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ ಅಪೀಲು (2)83/08–09 ದಿ: 06–03–2009 & 26–06–2009

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 104 ಸಿಎನ್‌ಎಸ್ 09 ದಿನಾಂಕ: 20–10–09

**ಪ್ರಸ್ತಾವನೆ:**

ಶ್ರೀ ಟಿ.ಎಂ. ಮುನಿಯಪ್ಪ ಪಿ.ಸಿ.–389, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಕರ್ತವ್ಯದಲ್ಲಿ (ಇನ್ನು ಮುಂದೆ ಅರ್ಜುದಾರರೆಂದು ಕರೆಯಲ್ಪಡುವ) ದುರ್ನಡತೆ ಮತ್ತು ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಶ್ರೀ ಟಿ.ಎಂ. ಮುನಿಯಪ್ಪ ಪೇದೆ –389, 'ಬಿ' ದಳ, 1ನೇ ಪಡೆ, ಕೆ.ಎಸ್.ಆರ್.ಪಿ ಬೆಂಗಳೂರು, ಆದ ನೀವು ದಿ, ಭಾರತಿ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ, ಲಿ, ಜಯನಗರ, ಬೆಂಗಳೂರು, ಇಲ್ಲಿ ಮಗನ ಮದುವೆಯ ಸಲುವಾಗಿ ರೂ. 20,000.00 ಗಳನ್ನು ಸಾಲ ಪಡೆದಿರುತ್ತೀರಿ. ಸಾಲ ಪಡೆಯಲು ಸಲ್ಲಿಸಿರುವ ವೇತನ ಪ್ರಮಾಣ ಪತ್ರವನ್ನು ಘಟಕಾಧಿಕಾರಿಗಳಿಂದ ಪಡೆಯದೆ ನಕಲಿ ವೇತನ ಪ್ರಮಾಣ ಪತ್ರ ಸಲ್ಲಿಸಿರುವುದು ಹಾಗೂ ಸಾಲದ ಬಾಕಿ ಉಳಿಸಿಕೊಂಡಿರುವುದು, ತನ್ಮೂಲಕ ನಿಮ್ಮ ಕಾರ್ಯ ವ್ಯಾಪ್ತಿ ಮೀರಿ ವರ್ತಿಸಿ ತೀವ್ರ ದುರ್ನಡತೆ ಮತ್ತು ಅಶಿಸ್ತು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇಪಡೆ, ಕೆ.ಎಸ್.ಆರ್.ಪಿ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:01–12–2007ರ ಆದೇಶದಲ್ಲಿ ಅರ್ಜಿದಾರರಿಗೆ ವಾಗ್ದಂಡನೆ ವಿದಿಸಿ, ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 23–05–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ, ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಲು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 347 ಪೊಸಿಅ 2008, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ಎಂ. ಮುನಿಯಪ್ಪ ಪಿ.ಸಿ.–389, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿದ ದಿನಾಂಕ: 01–12–2007ರ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ 6 ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2736

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಿ.ಎಸ್. ವೀರಮುಖಿ, ಸಿ.ಪಿ.ಸಿ–850 ಸವದತ್ತಿ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಅದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಸಿಬ್ಬಂದಿ 2/ಇವಿ/2/2005 (ಅ.ಪು.ಸಂ. 716/2005) ದಿ: 05–11–05
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ ಅಪೀಲು /64/ಉವ/2005 ದಿ: 14–03–06
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 03–10–08
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ ಅಪೀಲು (2)85/08–09 ದಿ: 08–05–2009
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 120 ಸಿಎನ್‌ಎಸ್ 09 ದಿನಾಂಕ:20–10–09

**ಪ್ರಸ್ತಾವನೆ:**

ಶ್ರೀ ಜಿ.ಎಸ್. ವೀರಮುಖ, ಸಿ.ಪಿ.ಸಿ–850 ಸವದತ್ತಿ ಪೊಲೀಸ್ ಠಾಣೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

> "ಆಪಾದಿತ ಪೊಲೀಸ್ ಅಧಿಕಾರಿಯಾದ ಸಿ.ಪಿ.ಸಿ–850 ಜಿ.ಎಸ್.ವೀರಮುಖ, ಸವದತ್ತಿ ಠಾಣೆ ಸಧ್ಯ ಮುನವಳ್ಳಿ ಉಪಠಾಣೆ ರವರಾದ ನೀವು ಮುನವಳ್ಳಿ ಉಪಠಾಣೆಯ ಎದುರಿಗೆ ಹೋಗುವ ಖಾಸಗಿ ವಾಹನಗಳ ಚಾಲಕರಿಗೆ ಕಿರುಕುಳ ನೀಡುವುದು ಅವರಿಂದ ಹಣ ವಸೂಲಿ ಮಾಡುತ್ತಿರುವ ಬಗ್ಗೆ ಬಾತ್ಮಿಗಳು ಬಂದಿದ್ದು ದಿ: 24–12–2004ರಂದು ಮಧ್ಯಾಹ್ನ 12.20 ಗಂಟೆಗೆ ಮುನವಳ್ಳಿ ಉಪಠಾಣೆಯಲ್ಲಿ ಕುಳಿತು ಉಪಠಾಣೆ ಹತ್ತಿರ ಒಬ್ಬ ಖಾಸಗಿ ವ್ಯಕ್ತಿಯಿಂದ ಖಾಸಗಿ ವಾಹನ ಸಂ:ಕೆ–23/6563 ನೇದ್ದರ ವಾಹನ ಚಾಲಕನನ್ನು ನಿಲ್ಲಿಸಿ, ಅವನಿಗೆ ಹಣ ನೀಡುವಂತೆ ವತ್ತಾಯಿಸಿದ್ದು, ಅದರಂತೆ ಸದರಿ ಚಾಲಕರು 100–00 ರೂಪಾಯಿ ನೀಡಿರುವುದನ್ನು ಸದರ ಖಾಸಗಿ ವ್ಯಕ್ತಿಯಿಂದ ನೀವು ಪಡೆದುಕೊಂಡು ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿರುವಿರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 05–11–2005ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ಕನಿಷ್ಠ ಮೂಲ ವೇತನಕ್ಕೆ ಇಳಿಸಿ, ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸುವ ದಂಡನೆಯನ್ನು ವಿಧಿಸಿದ್ದಾರೆ. ದಿ: 25–12–2004 ರಿಂದ 30–03–2005ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ ಬೆಳಗಾವಿ, ಇವರು ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 14–03–06ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. ಆದರೆ ಶಿಸ್ತು ಪ್ರಾಧಿಕಾರದ ದಂಡನಾದೇಶವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 59 1(ಬಿ)ಗೆ ವ್ಯತಿರಿಕ್ತವಾಗಿರುವುದರಿಂದ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುಗಸ್ಕರಿಸಲು ಸರ್ಕಾರವು ತೀರ್ಮಾನಿಸಿ ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 350 ಪೊಸಿಅ 2008, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಎಸ್. ವೀರಮುಖ, ಸಿ.ಪಿ.ಸಿ.–850, ಸವದತ್ತಿ ಪೊಲೀಸ್ ಠಾಣೆ ಬೆಳಗಾವಿ. ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

i. ಶಿಸ್ತು ಪ್ರಾಧಿಕಾರವು ಇವರಿಗೆ ದಂಡನೆಯನ್ನು ವಿಧಿಸಿ, ಆದೇಶ ಹೊರಡಿಸಿದ ತಿಂಗಳಿನ ಮುಂದಿನ ತಿಂಗಳು ಅಂದರೆ ದಿನಾಂಕ: 01–12–2005ರಿಂದ ಜಾರಿಗೆ ಬರುತ್ತದೆ (ದಂಡನಾದೇಶದ ದಿನಾಂಕ: 05–11–2005 ಆಗಿರುವುದರಿಂದ)

ii. ಇವರ ದಂಡನೆಯು ದಿ:01–12–2005 ರಿಂದ 30–11–2008ರ ವರೆಗೆ ಮೂರು ವರ್ಷಗಳು ಇರುತ್ತದೆ.

iii. ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ಕಾಲಿಕ ವೇತನ ಶ್ರೇಣಿ ರೂ. 3,000–5,450/– ಆಗಿದ್ದು (1999ರ ಪರಿಷ್ಕೃತ ವೇತನ ಶ್ರೇಣಿಯಂತೆ) ಇವರ ವೇತನವನ್ನು ಸದರಿ ಹುದ್ದೆಯ ಕನಿಷ್ಠ ವೇತನ ರೂ. 3,000/–ಕ್ಕೆ (ದಿ:01–12–2005 ರಿಂದ ಜಾರಿಗೆ ಬರುವಂತೆ) ಮೂರು ವರ್ಷಗಳ ಕಾಲ ಸಂಚಿತ ಪರಿಣಾಮ ರಹಿತ (Without Cummulative Effect) ವಾಗಿ ಇಳಿಸಿದೆ. ದಂಡನೆಯ ಅವಧಿಯಲ್ಲಿ ಇವರು ಯಾವುದೇ ವಾರ್ಷಿಕ

ವೇತನ ಬಡ್ತಿಯಾಗಲೀ ಅಥವಾ ಪದೋನ್ನತಿಯಾಗಲಿ ಪಡೆಯಲು ಅರ್ಹರಿರುವುದಿಲ್ಲ, ಇವರ ವೇತನವು ಸ್ಥಿರವಾಗಿರುತ್ತದೆ.

iv. ದಂಡನಾವಧಿಯಾದ ಮೂರು ವರ್ಷಗಳು ಪೂರ್ಣಗೊಂಡ ನಂತರ ಇವರ ವೇತನವನ್ನು ಇವರು ದಂಡನಾವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನ ಹಾಗೂ ತಡೆಹಿಡಿಯಲಾಗಿದ್ದ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಸೇರಿಸಿ ಕಾಲ್ಪನಿಕವಾಗಿ ಮರುನಿಗದಿಗೊಳಿಸುವುದು.

v. ಇವರ ಅಮಾನತ್ತಿನ ಅವಧಿ ದಿ: 25–12–04ರಿಂದ 30–03–2005ರ ವರೆಗಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2737 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಟಿ.ಆರ್. ಪವಾರ, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಅಶೋಕ ನಗರ ಪೊಲೀಸ್ ಠಾಣೆ, ಗುಲ್ಬರ್ಗಾ. ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಅದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಇವಿ/12/ಈವ/2006 ಅ.ಪು.ಸಂ. 229/ ಈವ/07 ದಿ: 02–04–07
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ ಮತ್ತು ಐ.ಜಿ.ಪಿ ಬೆಂಗಳೂರು, ಇವರ ಆದೇಶ ಸಂಖ್ಯೆ ಅಪೀಲು (6)/42/2007–08 ಓ.ಬಿ. ಸಂ: 57/2007–08 ದಿ: 16–10–2007
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 12–02–08
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ ಅಪೀಲು (2)138/2007–08 ದಿ: 01–04–2009
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 97 ಸಿಎನ್‌ಎಸ್ 08 ದಿನಾಂಕ:12–05–09

**ಪ್ರಸ್ತಾವನೆ:**

ಶ್ರೀ ಟಿ.ಆರ್. ಪವಾರ, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಅಶೋಕ ನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಇವರು ದೇವದುರ್ಗ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ಲೋಪದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಟಿ.ಆರ್. ಪವಾರ, ಪಿ.ಎಸ್.ಐ ದೇವದುರ್ಗ ಠಾಣೆ, ಸದ್ಯ ಡಿ.ಸಿ.ಐ.ಬಿ ಘಟಕ ಗುಲ್ಬರ್ಗಾ ರವರೇ, ದಿನಾಂಕ: 18–05–2006 ರಂದು ದೇವದುರ್ಗ ಪೊಲೀಸ್ ಠಾಣೆ ಹದ್ದಿಯ ಅರಕೇರಾ ಗ್ರಾಮದಲ್ಲಿ ಮಡಿವಾಳ ಜನಾಂಗದ ಹುಸೇನಪ್ಪ ಮತ್ತು ಆತನ ಪತ್ನಿಯನ್ನು ಅದೇ ಗ್ರಾಮದ ಅಕ್ಕಯ್ಯ, ಗೋವಿಂದ, ರಂಗಪ್ಪ, ಶ್ರೀಮಂತ, ತಿರುಪತಿ ಹಾಗೂ ಇತರರು ಸೇರಿ ವಿದ್ಯುತ್ ಕಂಬಕ್ಕೆ ಕಟ್ಟಿ ಹಾಕಿ ಹೊಡೆಬಡೆ ಮಾಡುತ್ತಿದ್ದಾರೆ. ಎನ್ನುವ ವಿಷಯವನ್ನು ದೌರ್ಜನ್ಯಕ್ಕೆ ಒಳಗಾದ ಹುಸೇನಪ್ಪನ ಮಗಳು ಈ ವಿಷಯವನ್ನು ತಿಳಿದು ಅರಕೇರಾ ಗ್ರಾಮದಿಂದ ಸುಮಾರು 11.00 ಗಂಟೆಯ ವೇಳೆಯಲ್ಲಿ ದೇವದುರ್ಗ ಪೊಲೀಸ್ ಠಾಣೆಗೆ ಫೋನ್ ಮುಖಾಂತರ ಮಾಹಿತಿ ತಿಳಿಸಿದ್ದು. ಇರುತ್ತದೆ. ಇಂತಹ ಗಂಭೀರ ಸ್ವರೂಪದ ವಿಷಯ ತಿಳಿದರೂ ಸಹ ನೀವು ಕೂಡಲೇ ಕಾರ್ಯ ಪ್ರವೃತ್ತರಾಗಿ ಸಿಬ್ಬಂದಿಯ ಸಮೇತ ಸದರಿ ಗ್ರಾಮಕ್ಕೆ ಭೇಟಿ ಕೊಟ್ಟು ಮುಂದಿನ ಅನಾಹುತವನ್ನು ತಪ್ಪಿಸುವಲ್ಲಿ ಹಾಗೂ ಕ್ರಮ ತೆಗೆದುಕೊಳ್ಳುವಲ್ಲಿ ಹಾಗೂ ದಿನಾಂಕ:17–05–2006ರ ಡೈರಿಯನ್ನು ರಾತ್ರಿ 23.30 ಗಂಟೆಯವರೆಗೆ ಬರೆದು (ಎಸ್.ಎಚ್.ಡಿ.ಸಂ:00469, ಕ್ರಮ ಸಂ: 25) ಮುಂದಿನ ಠಾಣಾ ದಿನಚರಿಯನ್ನು ಬರೆಯದೇ ಸ್ಥಗಿತಗೊಳಿಸಿ ಕರ್ತವ್ಯದಲ್ಲಿ ವಿಫಲರಾಗಿ ಗುರುತರವಾದ ಅಪರಾಧವೆಸಗಿರುತ್ತೀರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿಯನ್ನು ಶಿಸ್ತು ಪ್ರಾಧಿಕಾರವು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 02–04–07ರ ಆದೇಶದಲ್ಲಿ ಅರ್ಜಿದಾರರ ವೇತನದ ಎರಡು ಹಂತಗಳನ್ನು ಒಂದು ವರ್ಷದ ಅವಧಿಗೆ

ಕೆಳಗಿಳಿಸಲಾಗಿದೆ. (ಸದರಿ ಅವಧಿಯಲ್ಲಿ ಆಪಾಧಿತರು ಯಾವುದೇ ವಾರ್ಷಿಕ ವೇತನ ಬಡ್ತಿಗೆ ಅರ್ಹರಲ್ಲ) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ, ಇವರ ವೇತನದ ಒಂದು ಹಂತವನ್ನು ಒಂದು ವರ್ಷದ ಅವಧಿಗೆ ಇಳಿಸಿ, ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 16–10–2007ರ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ದಂಡನಾದೇಶವನ್ನು ಮಾರ್ಪಡಿಸುವ ಕುರಿತು ಕರ್ನಾಟಕ ಲೋಕಸೇವಾ ಆಯೋಗವನ್ನು ಸಮಾಲೋಚಿಸಲಾಗಿದ್ದು ಮೇಲೆ ಓದಲಾದ (5)ರ ಪತ್ರದಲ್ಲಿ ಆಯೋಗವು ಸರ್ಕಾರದ ಪ್ರಸ್ತಾವನೆಗೆ ಸಹಮತಿಸದೇ ಮೇಲ್ಮನವಿ ಪ್ರಾಧಿಕಾರದ ದಂಡನಾದೇಶವನ್ನು ಎತ್ತಿಹಿಡಿದಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 120 ಪೊಸಿಅ 2008, ಬೆಂಗಳೂರು, ದಿನಾಂಕ: 21ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ಆರ್. ಪವಾರ, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಅಶೋಕ ನಗರ ಪೊಲೀಸ್ ಠಾಣೆ, ಗುಲ್ಬರ್ಗಾ. ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2738

**ಟಿ.ಎಸ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

## HOME SECRETARIAT

**Sub:** Constitution of District level Committee to deal with the forged notes and circulation regarding.

**Read:** 1) D.O. Letter No. Bg Cy. 4436/01-01-27/2007-08 dated 19-2-2008 from regional Director for Karnataka Reserve Bank of India, Bangalore.

2) Government Order No. HD 61 CWP 08 dated 17-5-2008

3) Letter No. Bg Cy. 1918/01-01-18/2009-10 dated 26.10.2009 from the Reserve Bank of India, Bangalore

**Preamble:**

The Regional Director for Karnataka, Reserve Bank of India, Bangalore has brought to the notice of Government that the incidence of detection of forged notes in various parts of the Country has been showing an increasing trend. The accumulated balance of detected forged noted as on end of June 2009 stood at 7548 pieces with Reserve Bank of India, Bangalore not to mention such accumulation with bank branches in the upcountry districts of the State. This represents an increase from 2700 piecea as on 30th June 2007. The Reserve Bank of India has considered that this serious menace needs to be tackled at two levels involving the State Administrative Machinery that is the State Police, the Bangalore Police and the District Administration.

Accordingly in Government Order cited at (2) above a State Level Committee was constituted under the Chairmanship of the Director General and Inspector General of Police, Bangalore.

In the letter cited at (3) above the Reserve Bank of India, has recommended that District Level Committees may be constituted in the border districts where the detection/seizure of counterfeits has been substantial or there is a perceived threat of the same in the district and suggested to constitute District Level Committees in the districts of Dakshina Kannada, Chikmagalur and Shimoga identified as naxal affected by Karnataka Police as the counterfeit notes may be channelized for financing the terrorist

activities. The Reserve Bank of India has also suggested for constitution of District Level Committees in the districts of Bangalore Urban, Hassan Bagalkot, Kolar, Gulbarga, Uttar Kannada, Belgaum, Raichur, Bellary, Gadag, Mysore, Mandya, Tumkur, Chitradurga, Chamarajanagar and Hubli Dharwad as detection of forged notes at the end of reserve Bank of India have been relatively high in these districts.

The recommendations of the Reserve Bank of India has been Considered and hence the following order.

**Order No. HD 61 CWP 2008, Bangalore, Dated: 30th November 2009**

The Government of Karnataka hereby constitutes the District Level Committee Constituting the following members for looking into various aspects connected with forged notes and circulation there of in the Districts of Dakshina Kannada, Chikmagalur Shimoga Bangalore Urban, Hassan Bagalkot, Kolar, Gulbarga, Uttar Kannada, Belgaum, Raichur, Bellary, Gadag, Mysore, Mandya, Tumkur, Chitradurga, Chamarajanagar and Hubli Dharwad.

**DISTRICT LEVEL COMMITTEE**

| | | |
|---|---|---|
| 01 | Deputy Commissioner | Chairman |
| 02 | Superintendent of Police, | Vice Chairman |
| 03 | District Co-ordinator (Branch Manager Currency Chest) | Member |
| 04 | Public Sector Bank representative (to be selected by District Coordinator Bank) | Member |
| 05 | Reserve Bank of India representative | Member |

The Committee shall deal with the following issues relating to counterfeit banknotes viz.

i) Sharing of information on seizures/detection
ii) Lodging of FIR/alternative measure
iii) Reviewing measures to curb circulation of forged notes
iv) Tackling/focusing on both the “Cause and effect” of the menace
v) Misuse of coins.

The Committee shall meet once in three months to share information and review the position of forged notes detected by the banks/registered with the police and discuss measures taken/to be taken to curb the circulation.

By Order and in the name of the Governor of Karnataka

P.R. 2739

**P. SHIVARAMA BHAT**

Under Secretary to Government, Home Department (Crimes)

**FINANCE SECRETARIAT**

**Sub:** Delegation of financial powers to Inspector General of Police & Addl. Director General Karnataka State Fire and Emergency Services Department-reg.

**Read:** 1) Govt. Order No. FD 2 TFP 98 dated: 17-05-1999.
2) Govt. Order No. FD 01 TFP 2001 dated: 02-02-2001
3) Letter No. ಲೆಪವಿ/56/ಆಯವ್ಯಯ/2003–04 ದಿನಾಂಕ: 04-07-2008. from Director General of Police and Director Karnataka State Fire and Emergency Services, Bangalore.
4) Letter No. Act: 56/Budget/2003-04 dated 04-07-2008 and 24-09-2009 from IGP & Addl. Director General, Karnataka State Fire and Emergency Services Department.

**Preamble:**

In the Government Order read at (1) above Government have notified the officers of Government Department who would exercise the Common Financial Powers delegated by Government order No. FD 7

TFP 1991 dated 16-09-2001 at the Head of Departments/Divisional/District/Sub-Divisional/Taluk levels of their respective Departments. These powers have been enhanced vide Government Order No. FD 01 TFP 2001 dated: 02-02-2001.The Director General of Police and Director of Karnataka State Fire and Emergency Services Department Bangalore vide his letter read at (3) above has requested to delegate financial powers considering Inspector General of Police & Additional Director General, Fire and Emergency Services as "Other Head of Department. In the letter read at (4) above, Inspector General of Police and Addl. Director General, Fire and Emergency Services has requested to issue the orders delegating the Financial powers to the Inspector General of Police and Addl. Director General, of Fire and Emergency Services.

After careful Examination Government considers it necessary to include Inspector General of Police and Addl. Director General, Fire and Emergency Services as Divisional level Officer for Exercising common Financial Powers delegated by Government order No. FD 1 TFP 2001 dated 02-02-2001 and hence this order.

**Govt. Order No. FD 07 TFP 2009, Bangalore, Dated: 30th November 2009**

Government is pleased to notify the Officers of the Karnataka State Fire and Emergency Services Department as annexure-I to this order who would exercise the Common Financial Powers delegated vide Government Order No. FD 01 TFP 2001 dated 02-02-2001 at the Head of Department/Divisional/District levels in respect of Fire and Emergency Services. Department in partial modification of levels indicated in annexure to Government No. FD 2 TFP 98, dated 17-05-1999.

2. This Order is only for exercise of Financial/Administrative Powers and does not bestow any equality of administrative status of officers among different departments.

3. If any post is abolished/upgraded/downgraded the department should immediately inform Finance Department for suitable amendment.

By Order and in the name of the Governor of Karnataka

**C. SHAMARAO**

Under Secretary to Government,

(FR & BCC) Finance Department

**ANNEXURE-I**

**Government Order No FD 07 TFP 2009, Dated: 30-11-2009**

| Administrative Department | Name of the Dept. or HOD | Divisional Level Officer | Dist. Level Officer | Sub-Division Level officer | Taluk Level Officer |
|---|---|---|---|---|---|
| Home Department | 4) Director General of Police and Director of K.S.F & E.S. | I.G.P. & Addl. Director General K.S.F & E.S. | Deputy Inspector General of Police of K.S.F & E.S. | - | - |

**C. SHAMARAO**

P.R. 2746 Under Secretary to Government, (FR & BCC) Finance Department

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ವಿಠಲ್ ಶೆಟ್ಟಿಗಾರ್, ನಿವೃತ್ತ ತಹಶೀಲ್ದಾರ್ ಇವರಿಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಪತ್ರ ಸಂ: ಎಸಿಟಿ(2):ಸಿಆರ್: 160–06–07, ದಿನಾಂಕ:26–03–2007.

2) ಪ್ರಾದೇಶಿಕ ಆಯುಕ್ತರ ಕಛೇರಿ ಇವರ ಪತ್ರ ಸಂ: ಇಎಸ್‌ಟಿ (1):ಸಿಆರ್: 98/08–09 ದಿನಾಂಕ:6/15–12–2008.

3) ಮಹಾಲೇಖಪಾಲರು (ಎ&ಇ) ಕರ್ನಾಟಕ ಇವರ ಪತ್ರ ಸಂ: ಇಎಸ್‌ಟಿ(5) ಸಿಆರ್: 98/08–09 ದಿನಾಂಕ: 6/15–12–2008.

4) ಸರ್ಕಾರದ ಆದೇಶ ಸಂ: ಆರ್‌ಡಿ 205 ಎಎಸ್‌ಡಿ 2009, ದಿನಾಂಕ: 02–07–2009.

5) ಮಹಾಲೇಖಪಾಲರು (ಎ&ಇ) ಕರ್ನಾಟಕ ಇವರ ಪತ್ರ ಸಂ: GE-1/R-1/Vol/127-24/09-10/629, ದಿನಾಂಕ: 02–09–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ (1) ದಿನಾಂಕ: 26–03–2007ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ಶ್ರೀ ವಿಠಲ್ ಶೆಟ್ಟಿಗಾರ್, ಹಿಂದಿನ ತಹಶೀಲ್ದಾರ್ ಹೊಸನಗರ ತಾಲ್ಲೂಕು, ಪ್ರಸ್ತುತ ನಿವೃತ್ತ ಇವರಿಗೆ ದಿನಾಂಕ: 01–04–2005ರಿಂದ ಜಾರಿಗೆ ಬರುವಂತೆ ಒಟ್ಟು 3 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಕೋರಿದ್ದರು. ಅದರಂತೆ, ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ಕ್ರ.ಸಂ(4)ರಲ್ಲಿ ಓದಲಾದ ದಿನಾಂಕ:02–07–2009ರಲ್ಲಿ ಶ್ರೀ ವಿಠಲ್ ಶೆಟ್ಟಿಗಾರ್, ನಿವೃತ್ತ ತಹಶೀಲ್ದಾರ್ ಇವರಿಗೆ ದಿನಾಂಕ: 01–04–2005 ರಿಂದ ಜಾರಿಗೆ ಬರುವಂತೆ ಒಟ್ಟು 3 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ (5)ರಲ್ಲಿ ಓದಲಾದ ದಿನಾಂಕ: 02–09–2009ರ ಪತ್ರದಲ್ಲಿ ಮಹಾಲೇಖಪಾಲರು ತಿಳಿಸಿರುವುದೇನೆಂದರೆ ಶ್ರೀ ವಿಠಲ್ ಶೆಟ್ಟಿಗಾರ್ ಇವರಿಗೆ ಸರ್ಕಾರದ ಆದೇಶ ಸಂ: ಆರ್‌ಡಿ 102 ಎಎಸ್‌ಡಿ 2007, ದಿನಾಂಕ: 24–12–2007ರಲ್ಲಿ ದಿನಾಂಕ: 27–01–2001 ರಿಂದ ಜಾರಿಗೆ ಬರುವಂತೆ ಪೂರ್ವಾನ್ವಯ ಬಡ್ತಿ ನೀಡಿರುವುದರಿಂದ ಅವರ ವೇತನವನ್ನು ಪರಿಷ್ಕರಿಸಲಾಗಿ, ಶ್ರೀ ವಿಠಲ್ ಶೆಟ್ಟಿಗಾರ್‌ರವರು ವೇತನ ಶ್ರೇಣಿ ರೂ. 6,000–11,200 ರಲ್ಲಿ ದಿನಾಂಕ: 01–04–2003ರ ರಂದು ಗರಿಷ್ಠ ವೇತನ ಮಿತಿ ತಲುಪಿರುತ್ತಾರೆಂದು ಸದರಿಯವರು ದಿನಾಂಕ: 01–04–2004ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿಗೆ, ದಿನಾಂಕ:1–4–2005 ರಿಂದ ಎರಡನೇ ಸ್ಥಗಿತ ವೇತನ ಬಡ್ತಿಗೆ, ದಿನಾಂಕ:1–4–2006 ರಿಂದ ಮೂರನೇ ಸ್ಥಗಿತ ವೇತನ ಬಡ್ತಿಗೆ, ಹಾಗೂ ದಿನಾಂಕ:1–4–2007 ರಿಂದ ನಾಲ್ಕನೇ ಸ್ಥಗಿತ ವೇತನ ಬಡ್ತಿಗೆ ಅರ್ಹರಿರುವುದಾಗಿ ವರದಿ ಮಾಡುತ್ತಾ, ಈ ಬಗ್ಗೆ ಸರ್ಕಾರದಿಂದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 630 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ವಿಠಲ್ ಶೆಟ್ಟಿಗಾರ್, ನಿವೃತ್ತ ತಹಶೀಲ್ದಾರ್ ಇವರಿಗೆ ದಿನಾಂಕ: 1–4–2004 ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಒಟ್ಟು 4 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಿದೆ.

1. ದಿನಾಂಕ 1–4–2004–ಮೊದಲನೇ ಸ್ಥಗಿತ ವೇತನ ಬಡ್ತಿ–ವೇತನ ಶ್ರೇಣಿ ರೂ. 6,000–11,200.
2. ದಿನಾಂಕ 1–4–2005–ಎರಡನೇ ಸ್ಥಗಿತ ವೇತನ ಬಡ್ತಿ–ವೇತನ ಶ್ರೇಣಿ ರೂ. 6,000–11,200.
3. ದಿನಾಂಕ 1–4–2006–ಮೂರನೇ ಸ್ಥಗಿತ ವೇತನ ಬಡ್ತಿ–ವೇತನ ಶ್ರೇಣಿ ರೂ. 6,000–11,200.
4. ದಿನಾಂಕ 1–4–2007–ನಾಲ್ಕನೇ ಸ್ಥಗಿತ ವೇತನ ಬಡ್ತಿ–ವೇತನ ಶ್ರೇಣಿ ರೂ. 11,400–21,600.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2753

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ. (ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಸಿಆಸುಇ 88 ಸೇಅನೇ 2009, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2009**

**ವಿಷಯ:** ದಿನಗೂಲಿ ಆಧಾರದ ಮೇಲೆ ನೇಮಕಾತಿಗೊಂಡು ಸೇವೆಯಲ್ಲಿ ಸಕ್ರಮ ಹೊಂದಿದ ನಂತರ ಮೃತರಾದ ಸರ್ಕಾರಿ ನೌಕರರ ಕುಟುಂಬದ ಅವಲಂಬಿತರಿಗೆ ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡುವ ಬಗ್ಗೆ.

**ಉಲ್ಲೇಖ:** 1) ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 48 ಸೇಅನೇ 2006, ದಿನಾಂಕ: 24–11–2006.

2) ಪ್ರಾದೇಶಿಕ ಆಯುಕ್ತರು ಗುಲ್ಬರ್ಗಾ ವಿಭಾಗ, ಇವರ ದಿನಾಂಕ: 22–9–2009ರ ಅರೆ ಸರ್ಕಾರಿ ಪತ್ರ ಸಂಖ್ಯೆ: ಕಂ/ಪ್ರಾಆಗು/ಇಎಸ್‌ಸಿ/165/2008–09/284, ದಿನಾಂಕ: 22–9–2009.

ಕರ್ನಾಟಕ ಸಿವಿಲ್ ಸೇವಾ (ಅನುಕಂಪದ ಆಧಾರದ ಮೇಲೆ ನೇಮಕಾತಿ) ನಿಯಮಗಳು 1996ರ ಪ್ರಕಾರ ಮೃತ ಸರ್ಕಾರಿ ನೌಕರರ ಕುಟುಂಬದ ಅವಲಂಬಿತರಿಗೆ ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡುವ ಬಗ್ಗೆ ಉಲ್ಲೇಖಿತ ಅಧಿಕೃತ ಜ್ಞಾಪನದನ್ವಯ ಸರ್ಕಾರದ ವಿವಿಧ ಇಲಾಖಾ ಮುಖ್ಯಸ್ಥರುಗಳು ಪ್ರಾದೇಶಿಕ ಆಯುಕ್ತರುಗಳ ಕಛೇರಿಗೆ ಪ್ರಸ್ತಾವನೆಗಳನ್ನು ಕಳುಹಿಸುತ್ತಿದ್ದಾರೆ. ಈ ರೀತಿಯ ಪ್ರಸ್ತಾವನೆಗಳಲ್ಲಿ ಬಹುತೇಕ ಪ್ರಕರಣಗಳು ದಿನಗೂಲಿ ನೌಕರರಾಗಿ ನೇಮಕಗೊಂಡು ಸೇವೆಯಲ್ಲಿ ಸಕ್ರಮ ಹೊಂದಿದ ನಂತರ ಮೃತರಾದ ನೌಕರರ ಪ್ರಕರಣಗಳಾಗಿರುತ್ತವೆ. ಆದರೆ, ಅಂತಹ ಪ್ರಕರಣಗಳಲ್ಲಿ ಆ ನೌಕರರುಗಳನ್ನು ಸೇವೆಯಲ್ಲಿ ಸಕ್ರಮಗೊಳಿಸಿದ ಬಗ್ಗೆ. ಅವರ ಸೇವಾ ಪುಸ್ತಕದಲ್ಲಿ ಯಾವ ಆದೇಶ/ನಿಯಮಗಳು/ನ್ಯಾಯಾಲಯದ ನಿರ್ದೇಶನ ಇವುಗಳನ್ವಯ ಸಕ್ರಮಗೊಳಿಸಲಾಗಿದೆ. ಎಂಬ ಬಗ್ಗೆ ಖಚಿತವಾದ ಮಾಹಿತಿ ಇರುವುದಿಲ್ಲ. ಈ ರೀತಿಯ ಪ್ರಕರಣಗಳ ಹೆಚ್ಚಿನ ಪರಿಶೀಲನೆಗಾಗಿ ಮೃತ ನೌಕರರು ದಿನಗೂಲಿ ನೌಕರರಾಗಿದ್ದು ನಂತರ ಸೇವೆಯಲ್ಲಿ ಸಕ್ರಮಾತಿಗೊಂಡ ವಿಷಯಕ್ಕೆ ಸಂಬಂಧಿಸಿದ ಮೂಲ ಕಡತವನ್ನು ಪ್ರಾದೇಶಿಕ ಆಯುಕ್ತರ ಕಛೇರಿಗೆ ಕಳುಹಿಸುವಂತೆ ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರನ್ನು ಕೋರಿದಾಗ, ಸಂಬಂಧಿಸಿದ ಮೂಲ ಕಡತಗಳು ಲಭ್ಯವಿಲ್ಲವೆಂದು ವರದಿ ಸಲ್ಲಿಸುತ್ತಾರೆಂದು ತಿಳಿದು ಬಂದಿದೆ. ಅದುದರಿಂದ, ದಿನಗೂಲಿ ಆಧಾರದ ಮೇಲೆ ನೇಮಕಾತಿ ಹೊಂದಿ ಸಕ್ರಮಾತಿ ಹೊಂದಿದ ನೌಕರರ ಪ್ರಕರಣಗಳಲ್ಲಿ ಸಂಬಂಧಪಟ್ಟ ಮೂಲ ಕಡತವನ್ನು ಒದಗಿಸುವಂತೆ ಮತ್ತು ಅದು ಲಭ್ಯವಿಲ್ಲದಿದ್ದಲ್ಲಿ ದಿನಗೂಲಿ ನೌಕರರನ್ನು ಸೇವೆಯಲ್ಲಿ ಸಕ್ರಮಾತಿಗೊಳಿಸಿದ ಬಗ್ಗೆ ಇಲಾಖಾ ಮುಖ್ಯಸ್ಥರು ದೃಢೀಕರಣ ಪ್ರಮಾಣ ಪತ್ರ ನೀಡಲು ಇಲಾಖಾ ಮುಖ್ಯಸ್ಥರುಗಳಿಗೆ ಸೂಚನೆ ನೀಡುವಂತೆ ಪ್ರಾದೇಶಿಕ ಆಯುಕ್ತರು ಗುಲ್ಬರ್ಗಾ, ಇವರು ದಿನಾಂಕ: 22–9–2009ರ ಉಲ್ಲೇಖದ ಪತ್ರದಲ್ಲಿ ಕೋರಿರುತ್ತಾರೆ.

ಆದುದರಿಂದ, ದಿನಗೂಲಿ ಆಧಾರದ ಮೇಲೆ ನೇಮಕಾತಿಗೊಂಡು ಸೇವೆಯಲ್ಲಿ ಸಕ್ರಮ ಹೊಂದಿದ ನಂತರ ಮೃತರಾದ ಸರ್ಕಾರಿ ನೌಕರರ ಕುಟುಂಬದ ಅವಲಂಬಿತರಿಗೆ ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡುವ ವಿಷಯಕ್ಕೆ ಸಂಬಂಧಿಸಿದ ಪ್ರಸ್ತಾವನೆಗಳನ್ನು ಪ್ರಾದೇಶಿಕ ಆಯುಕ್ತರಿಗೆ ಕಳುಹಿಸುವಾಗ, ಅಂತಹ ನೌಕರರುಗಳು ಸೇವೆಯಲ್ಲಿ ಸಕ್ರಮಾತಿಗೊಂಡ ಮೂಲ ಕಡತವನ್ನು ಲಭ್ಯಪಡಿಸುವಂತೆ ಹಾಗೂ ಆ ಕಡತ ಲಭ್ಯವಿಲ್ಲದೇ ಇದ್ದ ಪಕ್ಷದಲ್ಲಿ ನೌಕರರು ಸೇವೆಯಲ್ಲಿ ಸಕ್ರಮಾತಿಗೊಂಡಿರುವ ಬಗ್ಗೆ ಖಚಿತಪಡಿಸಲು, ಈ ಸುತ್ತೋಲೆಗೆ ಲಗತ್ತಿಸಿರುವ ನಮೂನೆಯಲ್ಲಿ ದೃಢೀಕರಣ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ನೀಡುವಂತೆ ಎಲ್ಲಾ ಇಲಾಖಾ ಮುಖ್ಯಸ್ಥರುಗಳನ್ನು ಕೋರಲಾಗಿದೆ.

**ದೇವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು–1).

**ದೃಢೀಕರಣ ಪ್ರಮಾಣ ಪತ್ರ**

ಶ್ರೀ/ಶ್ರೀಮತಿ/ಕುಮಾರಿ..............................................................................................................ತಂದೆ/ಗಂಡ /ತಾಯಿ ದಿವಂಗತ ಶ್ರೀ/ಶ್ರೀಮತಿ.........................................................................................ಇವರಿಗೆ ಅನುಕಂಪದ ಆಧಾರದ ನೇಮಕಾತಿಗಾಗಿ ಪ್ರಸ್ತಾವನೆ ಸಲ್ಲಿಸಲಾಗಿದೆ.

ಅರ್ಜಿದಾರರ ತಂದೆ/ಗಂಡ/ತಾಯಿ ಮೃತ ನೌಕರರಾದ ಶ್ರೀ/ಶ್ರೀಮತಿ.................................................................. ಇವರು ಸರ್ಕಾರಿ ನೌಕರರಾಗಿ ಸೇವೆ ಸಲ್ಲಿಸುತ್ತಿದ್ದು ಸದರಿಯವರ ಸೇವೆಯನ್ನು ದಿನಾಂಕ.........................................ರಿಂದ ಸರ್ಕಾರದ ಆದೇಶ ಸಂಖ್ಯೆ...........................................................ದಿನಾಂಕ......................................................ರ ಪ್ರಕಾರ ಸಕ್ರಮಗೊಳಿಸಲಾಗಿದೆ. ಅವರ ಅವಲಂಬಿತರಿಗೆ ಅನುಕಂಪದ ಆಧಾರಿತ ನೇಮಕಾತಿ ನೀಡುವ ವಿಷಯದಲ್ಲಿ ಮೂಲ ಕಡತವನ್ನು ಕೋರಿದ್ದು, ಅದು ಲಭ್ಯವಿರುವುದಿಲ್ಲವೆಂದು ಮತ್ತು ಮೃತ ನೌಕರರು ಸೇವೆಗೆ ಸಕ್ರಮಗೊಂಡಿರುವುದು ಸರ್ಕಾರದ ಆದೇಶದ ಪ್ರಕಾರ ಕ್ರಮಬದ್ಧವಾಗಿರುತ್ತದೆ. ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಸ್ಥಳ :

ದಿನಾಂಕ:

ಇಲಾಖಾ ಮುಖ್ಯಸ್ಥರು

ಪದನಾಮ

ಪಿ.ಆರ್. 2755

**ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ಶ್ರೀ ಕೆ.ಎಂ. ಅಶ್ವಥನಾರಾಯಣ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರಿಗೆ ರಜಾ ವೇತನ ಪಾವತಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಅಪಜೀ 87 ಅಪಸೇ 2002 ದಿನಾಂಕ: 10–12–2004.

2) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರಗಳ ಸಂಖ್ಯೆ: ಎ1–ರಜೆ–ಸಿಆರ್–146/2002–03 ದಿನಾಂಕ: 27–01–2009.

**ಪ್ರಸ್ತಾವನೆ:**

ಈ ಮೇಲೆ ಕ್ರ.ಸಂ(1) ರಲ್ಲಿ ಓದಲಾದ ದಿನಾಂಕ: 10–12–2004ರ ತಿದ್ದುಪಡಿ ಆದೇಶದಲ್ಲಿ ಶ್ರೀ ಕೆ.ಎಂ. ಅಶ್ವಥನಾರಾಯಣ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರಿಗೆ 885 ದಿನಗಳಿಗೆ ವೈದ್ಯಕೀಯ ಆಧಾರದ ಮೇಲೆ ರಜೆಯನ್ನು ಮಂಜೂರು ಮಾಡಲಾಗಿದೆ. ಆದರೆ ಸದರಿ ಅಧಿಕಾರಿಗಳಿಗೆ ರಜೆ ಅವಧಿಯ ವೇತನವನ್ನು ಪಾವತಿಸಲಾಗಿರುವುದಿಲ್ಲವೆಂದು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಮೇಲೆ ಓದಲಾದ ಪತ್ರ ದಿನಾಂಕ: 27–01–2009 ರಲ್ಲಿ ತಿಳಿಸಿ, ಸದರಿ ಪ್ರಕರಣದಲ್ಲಿ ವಿಳಂಬ ಮನ್ನಾ (Delay Condonation) ಮಾಡಿ ಅರ್ಹರಜೆ ಅವಧಿಗೆ ಸಂಬಳ ಮತ್ತು ಭತ್ಯ ಸಂದಾಯ ಮಾಡಲು ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 42 ಅಪಸೇ 2009, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2009**

ಶ್ರೀ ಕೆ.ಎಂ. ಅಶ್ವಥನಾರಾಯಣ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರಿಗೆ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಅಪಜೀ 87 ಅಪಸೇ 2002, ದಿನಾಂಕ: 10–12–2004ರಲ್ಲಿ ಮಂಜೂರು ಮಾಡಲಾದ ಈ ಕೆಳಕಂಡ ರಜಾ ಅವಧಿಯ ಸಂಬಳ ಮತ್ತು ಭತ್ಯೆ ಸಂದಾಯವಾಗಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 198ರ ಪ್ರಕಾರ ಅನುಮೋದನೆ ನೀಡಿದೆ.

| | |
|---|---|
| ದಿನಾಂಕ: 01–01–1993 ರಿಂದ 30–04–1993 | –120 ದಿವಸಗಳ ಅಂಗವೈಕಲ್ಯ ರಜೆಯ ಅವಧಿ |
| ದಿನಾಂಕ: 01–05–1993 ರಿಂದ 19–07–1993 | –80 ದಿವಸಗಳ ಗಳಿಕೆ ರಜೆ ಅವಧಿ |
| ದಿನಾಂಕ: 20–07–1993 ರಿಂದ 28–02–1994 | –224 ದಿವಸಗಳ ಅರ್ಧಸಂಬಳ ರಜೆ ಅವಧಿ |

ಮಹಾಲೇಖಪಾಲರು, ಈ ಮೇಲಿನ ರಜೆ ಅವಧಿಯ ಪೈಕಿ ಅರ್ಹ ಅವಧಿಗೆ ಮಾತ್ರ ರಜೆ ಸಂಬಳ ಮತ್ತು ಭತ್ಯಯನ್ನು ಸಂದಾಯ ಮಾಡಲು ಕ್ರಮ ಕೈಗೊಳ್ಳತಕ್ಕದ್ದು.

ಆದೇಶ ಸಂಖ್ಯೆ: FD 01 TFP 96, ದಿನಾಂಕ: 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದ ಮೇರೆಗೆ ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಡಗಾವೆ ಬಸವರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, (ಸೇವೆಗಳು)

ಪಿ.ಆರ್. 2767

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ. ಮಧುಸೂದನ್ ಆರ್. ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ ಮೆಳೆಕೋಟೆ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಒ(3) 142/2009–10 ದಿನಾಂಕ: 12–11–2009

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ. ಮಧುಸೂದನ್ ಆರ್., ಇವರು ದಿನಾಂಕ: 31–01–2009ರಂದು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಸೇವೆಗೆ ಸೇರಿದ್ದು, ವೈಯಕ್ತಿಕ ಕಾರಣಗಳಿಂದ ದಿನಾಂಕ: 30–10–2009ರಂದು ಹುದ್ದೆಗೆ ರಾಜೀನಾಮೆ ಸಲ್ಲಿಸಿ ದಿನಾಂಕ: 02–11–2009 ರಿಂದ ರಾಜೀನಾಮೆಯನ್ನು ಒಪ್ಪಿಕೊಳ್ಳುವಂತೆ ಕೋರಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ/ಮೊಕದ್ದಮೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವಾದ್ದರಿಂದ ದಿನಾಂಕ: 02–11–2009 ರಿಂದ ಜಾರಿಗೆ ಬರುವಂತೆ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 534 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಡಾ. ಮಧುಸೂದನ್ ಆರ್. ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಮೆಳೆಕೋಟೆ ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ನೀಡಿರುವ ರಾಜೀನಾಮೆಯನ್ನು ದಿನಾಂಕ: 02–11–2009 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 252(ಎ) ರನ್ವಯ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು–1)

**ವಿಷಯ:** ಡಾ: ರಾಘವೇಂದ್ರ ಪ್ರಭು ಟಿ.ಸಿ. ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕುಮಟಾ, ಉತ್ತರಕನ್ನಡ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಒ(3) 142/2009–10 ದಿನಾಂಕ: 12–11–2009

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ರಾಘವೇಂದ್ರ ಪ್ರಭು ಟಿ.ಸಿ. ಇವರು ದಿನಾಂಕ: 06–02–2009ರಂದು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಸೇವೆಗೆ ಸೇರಿದ್ದು, ಉನ್ನತ ವ್ಯಾಸಂಗಕ್ಕಾಗಿ ದಿನಾಂಕ: 22–06–2009 ರಿಂದ ಅನ್ವಯವಾಗುವಂತೆ ರಾಜೀನಾಮೆಯನ್ನು ಒಪ್ಪಿಕೊಳ್ಳುವಂತೆ ಕೋರಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ/ಮೊಕದ್ದಮೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವಾದ್ದರಿಂದ ದಿನಾಂಕ: 22–06–2009 ರಿಂದ ಜಾರಿಗೆ ಬರುವಂತೆ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 534 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಡಾ. ರಾಘವೇಂದ್ರ ಪ್ರಭು ಟಿ.ಸಿ. ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕುಮಟಾ, ಉತ್ತರಕನ್ನಡ ಜಿಲ್ಲೆ ಇವರು ನೀಡಿರುವ ರಾಜೀನಾಮೆಯನ್ನು ದಿನಾಂಕ: 22–06–2009 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 252(ಎ) ರನ್ವಯ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಪಿ.ಆರ್. 2768

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು–1)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಸ್. ಎಸ್. ಚಿಂಚಲಿ, ಹಿಂದಿನ ತಹಶೀಲ್ದಾರ್, ಮುದೋಳ್ ತಾಲ್ಲೂಕು ಹಾಲಿ ನಿವೃತ್ತರು ಹಾಗೂ ಇತರರ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಉಲ್ಲೇಖ:**

1) ಬಾಗಲಕೋಟೆ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಆರ್.ಬಿ/ ಇ.ಎಸ್.ಟಿ.3/ಸಿಆರ್:87/2005–06, ದಿನಾಂಕ: 30–1–2006.
2) ಬಾಗಲಕೋಟೆ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಆರ್.ಟಿ/ ಇ.ಎಸ್.ಟಿ.3/ಸಿಆರ್:87/2005–06, ದಿನಾಂಕ: 18–07–2006.
3) ಸರ್ಕಾರದ ಆದೇಶ ಸಂ: ಆರ್‌ಡಿ 11 ಎಡಿಇ 2000, ದಿನಾಂಕ: 21–12–2006.
4) ಸರ್ಕಾರದ ಕಾರಣ ಕೇಳುವ ನೋಟೀಸು ಸಂ: ಆರ್‌ಡಿ 11 ಎಡಿಇ 2006, ದಿನಾಂಕ: 09–01–2007.
5) ಶ್ರೀ ಎಸ್.ವಿ. ದೇವದಾಸ್, ಕಂದಾಯ ನಿರೀಕ್ಷಕರು, ಮುಧೋಳ್ ಇವರ ರಕ್ಷಣಾ ಹೇಳಿಕೆ ದಿನಾಂಕ:14–02–2007.
6) ಶ್ರೀ ಎಸ್.ಎಸ್. ಚಿಂಚಲಿ, ನಿವೃತ್ತ ತಹಶೀಲ್ದಾರ್ ಇವರ ರಕ್ಷಣಾ ಹೇಳಿಕೆ ದಿನಾಂಕ: 06–03–2009.

ಶ್ರೀ ಎಸ್.ಎಸ್. ಚಿಂಚಲಿ ಪ್ರಸ್ತುತ ನಿವೃತ್ತ ತಹಶೀಲ್ದಾರ್ ರವರು ಈ ಹಿಂದೆ ಮುದೋಳ್ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಮುದೋಳ್ ತಾಲ್ಲೂಕಿನ ಕುಳಲಿ ಗ್ರಾಮದ ರಿ.ಸ.ನಂ. 58 ಹಾಗೂ 64ರ ಜಮೀನಿನ ಮಂಜೂರಾತಿಯನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ಮೇರೆಗೆ ನಿಯಮ 7ರಲ್ಲಿ ಭೂ ಮಂಜೂರಾತಿ ಮಾಡಲು ಅಧಿಕಾರವಿರದಿದ್ದರೂ, ಅವರು ಭೂ ಮಂಜೂರಾತಿ ಮಾಡುವ ಪೂರ್ವದಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 3,4,5 ಮತ್ತು 6ರ ವಿಧಿ ವಿಧಾನಗಳನ್ನು ಅನುಸರಿಸಿ ಮಂಜೂರಾತಿ ಮಾಡಬೇಕಾಗಿದ್ದು, ಆ ರೀತಿ ಮಾಡದೇ ಸದರಿಯವರು ಭೂ ಮಂಜೂರಾತಿ ಮಾಡಿರುವುದು ನಿಯಮಗಳಿಗೆ ವ್ಯತಿರಿಕ್ತವಾಗಿದ್ದು, ಈ ಬಗ್ಗೆ ಬಾಗಲಕೋಟೆ ಜಿಲ್ಲಾಧಿಕಾರಿಗಳು ದಿನಾಂಕ: 18–11–2005 ರಂದು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ಕೆಳಗೆ ಆರೋಪಣಾ ಪಟ್ಟಿ ಅನುಬಂಧ 1 ರಿಂದ 4ರವರೆಗೆ ಕಾರಣ ಕೇಳುವ ನೋಟೀಸನ್ನು ಶ್ರೀ ಎಸ್.ಎಸ್. ಚಿಂಚಲಿ, ನಿವೃತ್ತ ತಹಶೀಲ್ದಾರ್ ಮತ್ತು ಶ್ರೀ ಎಸ್.ವಿ. ದೇವದಾಸ್, ಕಂದಾಯ ನಿರೀಕ್ಷಕರವರುಗಳಿಗೆ ಜಾರಿ ಮಾಡಿರುತ್ತಾರೆ. ಈ ಕಾರಣ ಕೇಳುವ ನೋಟೀಸಿಗೆ ಶ್ರೀ ಎಸ್.ವಿ. ದೇವದಾಸ್, ಕಂದಾಯ ನಿರೀಕ್ಷಕರು ದಿನಾಂಕ: 24–12–2005ರಂದು ಲಿಖಿತ ಉತ್ತರ ನೀಡಿ ಅವರ ಮೇಲಿನ ಆರೋಪಗಳನ್ನು

ಅಲ್ಲಗೆಳೆದಿರುತ್ತಾರೆ. ಶ್ರೀ ಎಸ್.ಎಸ್. ಚಿಂಚಲಿ ನಿವೃತ್ತ ತಹಶೀಲ್ದಾರ್ ರವರು ದಿ: 9–1–2006ರಂದು ಉತ್ತರ ಸಲ್ಲಿಸಿ ತಮಗೆ ನಿಯಮದ ಅರಿವು ಸರಿಯಾಗಿ ಆಗದೇ ತಪ್ಪು ಗ್ರಹಿಕೆಯಿಂದ ಆದೇಶ ಮಾಡಿದ್ದೇನೆಂದು ತಿಳಿಸಿದ್ದು, ಇದು ಅವರು ನಿಯಮ ಬಾಹಿರವಾಗಿ ಆದೇಶಗಳನ್ನು ಮಾಡಿರುವುದು ಸ್ಪಷ್ಟವಾಗುತ್ತದೆಂದು ಸದರಿಯವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವುದು ಅವಶ್ಯಕವಿರುತ್ತದೆಂದು ಶ್ರೀ ಎಸ್.ಎಸ್. ಚಿಂಚಲಿರವರು ಸೇವೆಯಿಂದ ನಿವೃತ್ತರಾಗಿರುವುದರಿಂದ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214ರನ್ವಯ ಅನುಮತಿ ನೀಡಲು ಮೇಲೆ ಓದಲಾದ (1)ರ ದಿನಾಂಕ: 30–1–2006ರ ಪತ್ರದಲ್ಲಿ ಬಾಗಲಕೋಟೆ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿದ್ದರು.

ಬಾಗಲಕೋಟೆ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಪ್ರಕರಣದಲ್ಲಿ ಗ್ರೂಪ್ "ಬಿ" ಅಧಿಕಾರಿಯಾದ ತಹಶೀಲ್ದಾರ್ ಹಾಗೂ ಗ್ರೂಪ್ "ಸಿ" ಅಧಿಕಾರಿಯಾದ ಕಂದಾಯ ನಿರೀಕ್ಷಕರು ಭಾಗಿಯಾಗಿದ್ದು, ಇವರಿಬ್ಬರ ವಿರುದ್ಧ, ಸರ್ಕಾರದ ಹಂತದಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 13ರನ್ವಯ ಜಂಟಿ ಇಲಾಖಾ ವಿಚಾರಣೆ ಜರುಗಿಸಬೇಕಾಗಿದ್ದು, ಸರ್ಕಾರದ ದಿನಾಂಕ: 29–5–2006ರ ಪತ್ರದಲ್ಲಿ ಬಾಗಲಕೋಟೆ ಜಿಲ್ಲಾಧಿಕಾರಿಗಳಿಂದ ಇಲಾಖಾ ವಿಚಾರಣಾ ಕಡತ ದಾಖಲೆಗಳನ್ನು ಕೋರಿದ್ದು, ಮೇಲೆ (2)ರಲ್ಲಿ ಓದಲಾದ ದಿನಾಂಕ: 18–7–2006ರ ಪತ್ರದಲ್ಲಿ ಬಾಗಲಕೋಟೆ ಜಿಲ್ಲಾಧಿಕಾರಿಗಳು ಇಲಾಖಾ ವಿಚಾರಣೆ ಕಡತ ದಾಖಲೆಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎಸ್.ಎಸ್. ಚಿಂಚಲಿ, ತಹಶೀಲ್ದಾರ್ ರವರು ದಿ:31–5–2005ರಂದು ವಯೋ ನಿವೃತ್ತಿ ಹೊಂದಿದ್ದು, ಸದರಿಯವರ ವಿರುದ್ಧದ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿ ಇಲಾಖಾ ವಿಚಾರಣೆ ಪ್ರಾರಂಭಿಸಲು ಮಂಜೂರಾತಿ ನೀಡಲು ಹಾಗೂ ಬಾಗಲಕೋಟೆ ಜಿಲ್ಲಾಧಿಕಾರಿಗಳು ಶ್ರೀ ಎಸ್.ಎಸ್. ಚಿಂಚಲಿ ನಿವೃತ್ತ ತಹಶೀಲ್ದಾರ್ ಹಾಗೂ ಶ್ರೀ ಎಸ್.ವಿ. ದೇವದಾಸ್, ಕಂದಾಯ ನಿರೀಕ್ಷಕರುವರುಗಳ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲು ಪ್ರಸ್ತಾಪಿಸಿ 1957ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11ರಡಿ ದೋಷಾರೋಪಣೆ ಪಟ್ಟಿ ಅನುಬಂಧ–1 ರಿಂದ 4ರವರೆಗೆ ನೀಡಿ ದಿ: 18–11–2005ರಂದು ಕಾರಣ ಕೇಳುವ ನೋಟೀಸ್ ನೀಡಿರುವುದು ಜಿಲ್ಲಾಧಿಕಾರಿಗಳ ಅಧಿಕಾರ ವ್ಯಾಪ್ತಿಯಲ್ಲಿ ಇಲ್ಲವಾದ್ದರಿಂದ ಇದನ್ನು ರದ್ದುಪಡಿಸಿ ಸರ್ಕಾರದ ಹಂತದಲ್ಲಿ ಪ್ರತ್ಯೇಕವಾಗಿ ದೋಷಾರೋಪಣೆ ಪಟ್ಟಿ ಅನುಬಂಧ–1 ರಿಂದ 4 ರವರೆಗೆ ನೀಡಿ ಜಂಟಿ ಇಲಾಖಾ ವಿಚಾರಣೆ ಪ್ರಾರಂಭಿಸಲು ನಿರ್ಧರಿಸಿ ಮೇಲೆ ಓದಲಾದ ಕ್ರ.ಸಂ(3)ರಲ್ಲಿ ಆದೇಶಿಸಲಾಗಿತ್ತು.

ಅದರಂತೆ, ಸರ್ಕಾರಿ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಕ್ರ.ಸಂ. (4)ರಲ್ಲಿ ಓದಲಾದ ದಿನಾಂಕ: 09–01–2007ರಲ್ಲಿ ಅನುಬಂಧ–1 ರಿಂದ (4) ರವರೆಗೆ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿದೆ. ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಉತ್ತರವಾಗಿ ಶ್ರೀ ಎಸ್.ಎಸ್. ಚಿಂಚಲಿ, ನಿವೃತ್ತ ತಹಶೀಲ್ದಾರ್ ಹಾಗೂ ಶ್ರೀ ಎಸ್.ಬಿ. ದೇವದಾಸ, ಕಂದಾಯ ನಿರೀಕ್ಷಕರು ಮೇಲೆ ಓದಲಾದ ಕ್ರ.ಸಂ.(5) ಮತ್ತು (6)ರಲ್ಲಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ಅಪಾದನೆಯನ್ನು ಅಲ್ಲಗೆಳೆದಿರುತ್ತಾರೆ. ಆದುದರಿಂದ ಅಪಾದಿತರುಗಳು ನೀಡಿರುವ ರಕ್ಷಣಾ ಹೇಳಿಕೆ ಹಾಗೂ ಪ್ರಕರಣದ ಸತ್ಯಾಸತ್ಯತೆಯನ್ನು ಪರಿಶೀಲಿಸಲು ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ನಿರ್ಧರಿಸಿ, ಶ್ರೀ. ಫ.ಸಿ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಗಣಪತಿ ಗುಡಿ ಹತ್ತಿರ, ಸಂಗೊಳ್ಳಿ ರಾಯಣ್ಣ ನಗರ, ಧಾರವಾಡ–02 ಇವರನ್ನು ವಿಚಾರಣಾ ಪ್ರಾಧಿಕಾರಿಗಳಾಗಿ ಮತ್ತು ಮುಧೋಳ್ ತಾಲ್ಲೂಕು ತಹಶೀಲ್ದಾರರನ್ನು ಮಂಡನಾಧಿಕಾರಿಯಾಗಿ ನೇಮಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 11 ಎಡಿಇ 2006, ಬೆಂಗಳೂರು, ದಿನಾಂಕ: 21ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರಡಿಯಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಎಸ್.ಎಸ್. ಚಿಂಚಲಿ, ತಹಶೀಲ್ದಾರ್ (ನಿವೃತ್ತ) ಮುಧೋಳ್ ತಾಲ್ಲೂಕು ಹಾಗೂ ಶ್ರೀ ಎಸ್.ವಿ. ದೇವದಾಸ್, ಕಂದಾಯ ನಿರೀಕ್ಷಕರು ಮುಧೋಳ್ ಇವರ ವಿರುದ್ಧದ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಫ.ಸಿ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಗಣಪತಿ ಗುಡಿ ಹತ್ತಿರ, ಸಂಗೊಳ್ಳಿ ರಾಯಣ್ಣ ನಗರ, ಧಾರವಾಡ–02 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11(5)ರಲ್ಲಿ ಬಾಗಲಕೋಟೆ, ಜಿಲ್ಲೆ, ಮುಧೋಳ್ ತಾಲ್ಲೂಕು ತಹಶೀಲ್ದಾರರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು ಬಾಗಲಕೋಟೆ ಜಿಲ್ಲೆ ಇವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ: ಸಿಆಸುಇ 22 ಸೇಇವಿ 2007, ದಿನಾಂಕ: 11–04–2008ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ)ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1,500/– (ಒಂದು ಸಾವಿರದ ಐದನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್) ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11 ಎರಲ್ಲಿನ ವಿಧಿವಿಧಾನವನ್ನು ಅನುಸರಿಸಿ, ಜರುಗಿಸಿ, ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2770 **ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು–3)

**ವಿಷಯ:** ಶ್ರೀ ದಾದರಾವ್, ಹಿಂದಿನ ತಹಶೀಲ್ದಾರ್ ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಶ್ರೀ ಶ್ರೀನಿವಾಸ, ನಿವೃತ್ತ ಶಿರಸ್ತೇದಾರ್ ಇವರಿಗೆ ದಂಡನೆಯನ್ನು ವಿಧಿಸುವ ಕುರಿತು.

**ಓದಲಾಗಿದೆ:** 1) ಕೋಲಾರ ಜಿಲ್ಲಾಧಿಕಾರಿಯವರ ಪತ್ರ ಸಂ:ಸಿಸಿಎ:ಸಿಆರ್:11: 2004–05, ದಿನಾಂಕ: 07–01–2005.

2) ಶ್ರೀ ದಾದರಾವ್, ತಹಶೀಲ್ದಾರ್ ಮತ್ತು ಇತರ ನೌಕರರಿಗೆ ನೀಡಿರುವ ತಿಳುವಳಿಕೆ ಪತ್ರ ಸಂ: ಕಂಇ 44 ಎಡಿಇ 04, ದಿನಾಂಕ: 07–03–2005.

3) ಅಧಿಕಾರಿ/ನೌಕರರು ನೀಡಿರುವ ಲಿಖಿತ ಹೇಳಿಕೆ.

ಅ) ಶ್ರೀ ದಾದರಾವ್, ತಹಶೀಲ್ದಾರ್ ದಿನಾಂಕ: 07–04–2005.

ಆ) ಶ್ರೀ ಎಂ.ಎನ್. ಸತೀಶ್ ಕುಮಾರ್, ಗ್ರಾಮಲೆಕ್ಕಿಗ ದಿನಾಂಕ: 02–05–2005.

ಇ) ಶ್ರೀ ಕೆ.ವಿ. ಚಂಗಲರಾಯಪ್ಪ, ಪ್ರ.ದ.ಸ ದಿನಾಂಕ: 12–05–2005.

ಈ) ಶ್ರೀ ಶ್ರೀನಿವಾಸ್, ಶಿರಸ್ತೇದಾರ್ ದಿನಾಂಕ: 03–06–2005

ಉ) ಶ್ರೀ ಗಂಗಯ್ಯ ಪ್ರ.ದ.ಸ. ದಿನಾಂಕ: 13–5–05.

ಊ) ಶ್ರೀ ಎ. ಶಿವರಾಜು, ಬೆರಳಚ್ಚುಗಾರರು, ದಿ: 30–04–2005.

4) ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2004, ದಿನಾಂಕ: 08–08–2005.

5) ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ವಿಚಾರಣಾಧಿಕಾರಿಗಳು ಹಾಗೂ ನಿವೃತ್ತ ಜಿಲ್ಲಾ ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ವಿಚಾರಣಾ ವರದಿ ದಿನಾಂಕ: 27–06–2006.

6) ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ: 02–11–2006.

7) ಎರಡನೇ ಕಾರಣ ಕೇಳುವ ನೋಟೀಸಿಗೆ ಅಧಿಕಾರಿ/ನೌಕರರು ನೀಡಿರುವ ಲಿಖಿತ ಹೇಳಿಕೆ.

ಅ) ಶ್ರೀ ದಾದಾರಾವ್, ತಹಶೀಲ್ದಾರ್ ದಿ: 23–11–2006.

ಆ) ಶ್ರೀ ಗಂಗಯ್ಯ ಪ್ರ.ದ.ಸ. ದಿನಾಂಕ: 08–12–2006.

ಇ) ಶ್ರೀ ಶ್ರೀನಿವಾಸ್, ನಿವೃತ್ತ ಶಿರಸ್ತೇದಾರ್ ದಿನಾಂಕ: 28–11–2006.

ಈ) ಶ್ರೀ ಎ. ಶಿವರಾಜು, ಹಿಂದಿನ ಬೆರಳಚ್ಚುಗಾರರು, ದಿ: 14–11–2006.

8) ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2004, ದಿನಾಂಕ: 28–03–2007.

9) ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಇವರ ಪತ್ರ ಸಂ: ಪಿಎಸ್‌ಸಿ 226 ಸಿಎನ್‌ಎಸ್ 2006, ದಿ: 20–02–2009.

10) ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2004, ದಿ: 01–06–2009.

11) ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಇವರ ಪತ್ರ ಸಂ: ಪಿಎಸ್‌ಸಿ 225 ಸಿಎನ್‌ಎಸ್ 06, ದಿ: 23–07–2009.

**ಪ್ರಸ್ತಾವನೆ:**

ಕೋಲಾರ ತಾಲ್ಲೂಕು ಸುಗಟೂರು ಹೋಬಳಿ, ಕೆಂಬತ್ತನಹಳ್ಳಿ ಗ್ರಾಮದ ಸ.ನಂ. 8ರಲ್ಲಿಯ ಸರ್ಕಾರಿ ಖರಾಬು ಜಮೀನಿನಲ್ಲಿ ಶ್ರೀಮತಿ ಮುನಿಯಮ್ಮ ಕೋಂ ಕೆ.ಜಿ. ಭೈರೇಗೌಡ ಇವರಿಗೆ ನಿಯಮಬಾಹಿರವಾಗಿ ಅನಧಿಕೃತ ಸಾಗುವಳಿ ಸಕ್ರಮೀಕರಣ ಯೋಜನೆಯಡಿ 4 ಎಕರೆ ಜಮೀನನ್ನು ಸಕ್ರಮೀಕರಣಗೊಳಿಸಲು ಸಹಕರಿಸಿ ಕರ್ತವ್ಯಲೋಪ ಎಸಗಿದ ಕೋಲಾರ ತಾಲ್ಲೂಕಿನ ಹಿಂದಿನ ತಹಶೀಲ್ದಾರರಾದ ಶ್ರೀ ದಾದಾರಾವ್ ಹಾಗೂ ಇನ್ನಿತರೆ 5 ಮಂದಿ ಸಿಬ್ಬಂದಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಇವರುಗಳ ವಿರುದ್ಧ ಕರಡು ದೋಷಾರೋಪಣೆಗಳನ್ನು ತಯಾರಿಸಿ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ: 07–01–2005ರ ಪತ್ರದಲ್ಲಿ ಕೋಲಾರ ಜಿಲ್ಲಾಧಿಕಾರಿಯವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13ರಡಿಯ ದೋಷಾರೋಷಣೆಗಳನ್ನು (ಅನುಬಂಧ 1 ರಿಂದ 4 ರವರೆಗೆ) ಆರೋಪಿತ ಅಧಿಕಾರಿ/ ನೌಕರರುಗಳಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ (2)ರಲ್ಲಿ ಓದಲಾದ ದಿನಾಂಕ: 07–03–2005 ನೋಟೀಸು ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು.

ಆಪಾದಿತ ಅಧಿಕಾರಿ/ನೌಕರರಲ್ಲಿ ಮೇಲೆ ಓದಲಾದ ಕ್ರ.ಸಂ (3)ರಲ್ಲಿ ಹೇಳಲಾಗಿರುವ ಆರೋಪಿತ ಅಧಿಕಾರಿ/ನೌಕರರುಗಳು ತಮ್ಮಗಳ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಸರ್ಕಾರವು ಆರೋಪಿತರ ವಿರುದ್ಧದ ಆರೋಪಗಳನ್ನು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿ, ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸುವುದು ಸೂಕ್ತವೆಂದು ತೀರ್ಮಾನಿಸಿ ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ: 08–08–2005ರ ಆದೇಶದಲ್ಲಿ ಶ್ರೀ ಲಕ್ಷ್ಮಿನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೋಲಾರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ಈ ಪ್ರಕರಣದ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಿ, ಮೇಲೆ ಓದಲಾದ ಕ್ರ.ಸಂ. (5)ರ ದಿನಾಂಕ: 27–06–2006ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಈ ಕೆಳಕಂಡಂತೆ ಅಧಿಕಾರಿ/ನೌಕರರ ವಿರುದ್ಧ ಆರೋಪಗಳ ಕುರಿತು ನಿರ್ಣಯಿಸಿರುತ್ತಾರೆ.

1) ಶ್ರೀ ದಾದರಾವ್, ಹಿಂದಿನ ತಹಶೀಲ್ದಾರ್ ಕೋಲಾರ – ಆರೋಪ ಸಾಬೀತಾಗಿರುತ್ತದೆ.
2) ಶ್ರೀ ಶ್ರೀನಿವಾಸ್, ಹಿಂದಿನ ಶಿರಸ್ತೇದಾರ್ ಕೋಲಾರ – ಆರೋಪ ಸಾಬೀತಾಗಿರುತ್ತದೆ.
3) ಶ್ರೀ ಗಂಗಯ್ಯ ಹಿಂದಿನ ರಾಜಸ್ವ ನಿರೀಕ್ಷಕರು – ಆರೋಪ ಸಾಬೀತಾಗಿರುತ್ತದೆ.
4) ಶ್ರೀ ಎ. ಶಿವರಾಜ್, ಹಿಂದಿನ ಬೆರಳಚ್ಚುಗಾರರು – ಆರೋಪ ಸಾಬೀತಾಗಿರುತ್ತದೆ.
5) ಶ್ರೀ ಎಂ.ಎನ್. ಸತೀಶ್, ಹಿಂದಿನ ಗ್ರಾಮಲೆಕ್ಕಿಗ – ಆರೋಪ ಸಾಬೀತಾಗಿರುವುದಿಲ್ಲ.
6) ಶ್ರೀ ಕೆ.ವಿ. ಚಂಗಲರಾಯಪ್ಪ, ಹಿಂದಿನ ಪ್ರ.ದ.ಸ – ಆರೋಪ ಸಾಬೀತಾಗಿರುವುದಿಲ್ಲ.

ಮೇಲ್ಕಂಡ ವಿಚಾರಣಾ ವರದಿಯಂತೆ, ಕ್ರ.ಸಂ. (1)ರಿಂದ 4 ರವರೆಗಿನ ಅಧಿಕಾರಿ/ನೌಕರರ ವಿರುದ್ಧ ಆರೋಪಗಳು ಸಾಬೀತಾಗಿದ್ದರಿಂದ, ಅವರುಗಳಿಗೆ ಮೇಲೆ ಓದಲಾದ ಕ್ರ.ಸಂ(6) ದಿನಾಂಕ: 02–11–2006ರಲ್ಲಿ 2ನೇ ಕಾರಣ ಕೇಳುವ ನೋಟಿಸನ್ನು ವಿಚಾರಣಾ ವರದಿಯೊಂದಿಗೆ ಜಾರಿ ಮಾಡಲಾಗಿತ್ತು. ಈ ಮಧ್ಯೆ ವಿಚಾರಣಾ ವರದಿಯಲ್ಲಿ, ಆರೋಪಗಳು ಸಾಬೀತಾಗಿಲ್ಲದ ಕಾರಣ, ಶ್ರೀ ಎಂ.ಎನ್. ಸತೀಶ್ ಕುಮಾರ್, ಹಿಂದಿನ ಗ್ರಾಮಲೆಕ್ಕಿಗರು ಹಾಗೂ ಶ್ರೀ ಕೆ.ವಿ. ಚಂಗಲರಾಯಪ್ಪ, ಹಿಂದಿನ ಪ್ರ.ದ.ಸ ಇವರುಗಳನ್ನು ಮೇಲೆ ಓದಲಾದ ಕ್ರ.ಸಂ.(8) ದಿನಾಂಕ: 28–03–2007ರಲ್ಲಿ ಆರೋಪಗಳಿಂದ ದೋಷಮುಕ್ತರನ್ನಾಗಿ ಆದೇಶ ಹೊರಡಿಸಲಾಗಿರುತ್ತದೆ. ಮುಂದುವರೆದು, ಸರ್ಕಾರದ ಎರಡನೇ ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರ.ಸಂ. (7)ರನ್ವಯ ಅಧಿಕಾರಿ/ನೌಕರರು ಈ ಕೆಳಕಂಡಂತೆ, ತಮ್ಮ ಲಿಖಿತ ಸಮಜಾಯಿಷಿಗಳನ್ನು ಸಲ್ಲಿಸಿರುತ್ತಾರೆ.

**1) ಶ್ರೀ ದಾದರಾವ್, ಹಿಂದಿನ ತಹಶೀಲ್ದಾರ್ ಕೋಲಾರ :–**

"ಸಕ್ರಮೀಕರಣ ಸಮಿತಿಯ ಸಭೆಯಲ್ಲಿ ಏಕ ಕಾಲಕ್ಕೆ ಸುಮಾರು ನೂರೈವತ್ತರಿಂದ ಇನ್ನೂರು ನಮೂನೆ 53ರ ಅರ್ಜಿಗಳನ್ನು ವಿಲೇಗೊಳಿಸಲು ಕ್ರಮ ಕೈಗೊಳ್ಳಬೇಕಾಗಿರುವುದರಿಂದ ಪ್ರತಿ ಅರ್ಜಿಯನ್ನು ಸಹ ಕೂಲಂಕಷವಾಗಿ ಪರಿಶೀಲಿಸುವ ಜವಾಬ್ದಾರಿಯನ್ನು ಸಂಬಂಧಪಟ್ಟ ರಾಜಸ್ವ ನಿರೀಕ್ಷಕರು, ಶಿರಸ್ತೇದಾರರು ಹಾಗೂ ವಿಷಯ ನಿರ್ವಾಹಕರ ಜವಾಬ್ದಾರಿಯೂ ಸಹ ಆಗಿರುತ್ತದೆ. ಈ ತರಹದ ಲೋಪ ದೋಷಗಳ ಬಗ್ಗೆ ನನ್ನನ್ನು ಹೊಣೆಗಾರರನ್ನಾಗಿ ಮಾಡುವುದು ಸರಿಯಿಲ್ಲವೆಂದು ಭಾವಿಸಲು ಕೋರಿದೆ. ನನ್ನ ಮೇಲೆ ಎಸಗಿರುವ ಆಪಾದನೆ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ತೋರಿಸಿರುವ ಆಪಾದನೆಗಳನ್ನು ಆಧಾರ ರಹಿತವೆಂದು ಪರಿಗಣಿಸಿ ನನ್ನ ವಿರುದ್ಧ ಹೂಡಲಾದ ಆಪಾದನೆಗಳನ್ನು ತಳ್ಳೀ ಹಾಕಿ ನನ್ನನ್ನು ದೋಷಮುಕ್ತನಾಗಿ ಮಾಡಲು ಈ ಮೂಲಕ ವಿನಂತಿಸಿಕೊಂಡಿರುತ್ತೇನೆ".

**2) ಶ್ರೀ ಶ್ರೀನಿವಾಸ್, ಹಿಂದಿನ ಶಿರಸ್ತೇದಾರ್ :–**

"ವಿಸ್ತೀರ್ಣಕ್ಕೆ ಸಂಬಂಧಿಸಿದಂತೆ ಮೋಜಣಿದಾರರು ತಪ್ಪಿತಸ್ತರಾಗಿದ್ದು, ಇವರನ್ನು ಕೈ ಬಿಟ್ಟು ವಿಚಾರಣೆ ಮಾಡಿರುವುದು ಸರಿಯಾದ ಕ್ರಮವಾಗಿರುವುದಿಲ್ಲ. ಆದ್ದರಿಂದ ವಿಚಾರಣೆಯಲ್ಲಿ ನನ್ನನ್ನು ದೋಷಮುಕ್ತಗೊಳಿಸಲು ಕೋರುತ್ತೇನೆ. ಅಥವಾ ಬೇರೆಯವರಿಂದ ನ್ಯಾಯಯುಕ್ತ ವಿಚಾರಣೆ ಮಾಡಲು ತಮ್ಮಲ್ಲಿ ಕೋರುತ್ತೇನೆ".

**3) ಶ್ರೀ ಗಂಗಯ್ಯ ಹಿಂದಿನ ರಾಜಸ್ವ ನಿರೀಕ್ಷಕರು :–**

"ಆರೋಪದಲ್ಲಿನ ಅಂಶಗಳಲ್ಲಿ ಯಾವುದೇ ತಪ್ಪನ್ನು ಎಸಗಿಲ್ಲವೆಂದು ನಿವೇದಿಸುತ್ತಾ ಆರೋಪದಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ".

**4) ಶ್ರೀ ಎ. ಶಿವರಾಜ್, ಹಿಂದಿನ ಬೆರಳಚ್ಚುಗಾರರು :–**

"ನಾನು ಒಬ್ಬ ಬೆರಳಚ್ಚುಗಾರನಾಗಿದ್ದರೂ ಕೂಡ, ನನ್ನ ಮೇಲಾಧಿಕಾರಿಗಳೂ ಸರ್ಕಾರದ/ ಸಾರ್ವಜನಿಕ ಕೆಲಸದ ಹಿತದೃಷ್ಠಿಯಿಂದ, ಬೆರಳಚ್ಚು ಕೆಲಸ ಜೊತೆ, ಕೆಲಸದ ಒತ್ತಡವಿರುವ ಬೇರೆ ಕೆಲಸವನ್ನು ನನಗೆ ಮೌಖಿಕ ಆದೇಶಾನುಸಾರ ವಹಿಸುತ್ತಿದ್ದರು. ಆದುದರಿಂದ ನಿಷ್ಠೆಯಂತೆ ಕರ್ತವ್ಯ ನಿರ್ವಹಿಸಿರುತ್ತೇನೆ. ಅದರಲ್ಲಿ ಆಗಿರುವುದೆಂದು ಹೇಳಲಾದ ಅಕ್ರಮಗಳಿಗೆ ನಾನು ಹೊಣೆಗಾರನಲ್ಲ. ನನ್ನ ಮೇಲಾಧಿಕಾರಿಗಳ ಆದೇಶ ಪಾಲಿಸಿರುವುದಕ್ಕೆ ನನಗೆ ದಂಡನೆ ವಿಧಿಸುವುದು ಸರಿಯಲ್ಲ. ನಾನು ಸರ್ಕಾರದ ಕೆಲಸವನ್ನು ನಿಷ್ಠೆಯಿಂದ ಮಾಡಿದ್ದಕ್ಕೆ ನನ್ನನ್ನು ದೋಷಿಯೆಂದು ತೀರ್ಮಾನಿಸಿ ದಂಡನೆ ವಿಧಿಸುವುದು ಸೂಕ್ತವಲ್ಲ. ದಯವಿಟ್ಟು ಇದರಲ್ಲಿ ನನ್ನ ತಪ್ಪೇನಿಲ್ಲವೆಂದು ಪರಿಗಣಿಸಿ ದೋಷಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ".

ಮೇಲ್ಕಂಡ ಲಿಖಿತ ಸಮಜಾಯಿಷಿಗಳನ್ನು ಸರ್ಕಾರವು ಪರಿಶೀಲಿಸಿ, ಈ ಪ್ರಕರಣದಲ್ಲಿ ಭಾಗಿಯಾಗಿರುವ ತಹಶೀಲ್ದಾರ್, ಶಿರಸ್ತೇದಾರ್, ಕಂದಾಯ ನಿರೀಕ್ಷಕರು ಹಾಗೂ ಬೆರಳಚ್ಚುಗಾರರು ಒಟ್ಟಿಗೆ ಸೇರಿ ಕಾನೂನಿಗೆ ವಿರುದ್ಧವಾಗಿ, ಕರ್ನಾಟಕ ಭೂ ಮಂಜೂರಾತಿಗೆ ವಿರುದ್ಧವಾಗಿ 4 ಎಕರೆ ಸರ್ಕಾರೀ ಜಮೀನನ್ನು, ಖೋಟ ದಾಖಲೆಗಳನ್ನು ಸೃಷ್ಟಿಸಿ, ಭೂ ಮಂಜೂರಾತಿ ಮಾಡಿದ್ದರೆಂದು, ನಿರ್ಣಯಿಸಿ, ವಿಚಾರಣಾಧಿಕಾರಿಗಳು ಸಲ್ಲಿಸಿದ್ದ ವರದಿಯನ್ನು ಒಪ್ಪಿ, ಮೇಲ್ಕಂಡ ಕ್ರ.ಸಂ. (1) ರಿಂದ (4)ರ ವರೆಗಿನ ಅಧಿಕಾರಿ/ನೌಕರರ ವಿರುದ್ಧ ಕಠಿಣ ದಂಡನೆಯನ್ನು ವಿಧಿಸಲು ತೀರ್ಮಾನಿಸಿದ್ದು, ಅದರಂತೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿ, ಆಯೋಗದವರು ಮೇಲೆ ಓದಲಾದ ಕ್ರ.ಸಂ. (9)ರ 20–02–2009ರಲ್ಲಿ ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲದ ಕಾರಣದಿಂದ ಮತ್ತು ತಪ್ಪು ಗ್ರಹಿಕೆಯಿಂದ ಮಂಜೂರಾಗಿರುವ ಸರ್ಕಾರಿ ಭೂಮಿಯನ್ನು ಹಿಂದಕ್ಕೆ ಪಡೆಯಲು ಎಲ್ಲಾ ಕ್ರಮಗಳನ್ನು ತಹಶೀಲ್ದಾರರವರು ತೆಗೆದುಕೊಂಡಿರುತ್ತಾರೆ. ತಹಶೀಲ್ದಾರರು ಮತ್ತು ಇತರೆ ಸಿಬ್ಬಂದಿ ವರ್ಗದವರಿಗೆ ಸಿಸಿಎ ನಿಯಮಗಳಡಿ ಸರ್ಕಾರ ವಿಧಿಸುವ ದಂಡ ಅಪಾದಿತ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಎಸಗಿರುವ ದುಷ್ಕೃತ್ಯಕ್ಕೆ ಸಮರ್ಪಕವಾಗಿರುವಂತಹದ್ದಾಗಿರಬೇಕಾಗಿರುತ್ತದೆ. (Appropriate). ಆದರೆ ಈ ಪ್ರಕರಣದಲ್ಲಿನ ಆಪಾದಿತ ಅಧಿಕಾರಿ ಮತ್ತು ಸಿಬ್ಬಂದಿಗಳು ಎಸಗಿರುವ ಕೃತ್ಯವು ಅವರುಗಳನ್ನು ಸೇವೆಯಿಂದಲೇ ತೆಗೆದುಹಾಕಬಹುದಾದಂತಹ ಕಠಿಣ ದಂಡನೆ ವಿಧಿಸಬಹುದಾದ ತೀವ್ರತೆ ಹೊಂದಿಲ್ಲವಾದ್ದರಿಂದ ಪ್ರಕರಣದಲ್ಲಿನ ಶ್ರೀ ದಾದಾರಾವ್, ತಹಶೀಲ್ದಾರ್ ಮತ್ತು ಇತರೆ ಸಿಬ್ಬಂದಿ ವರ್ಗದವರಿಗೆ ಸಿಸಿಎ 8 (ii) ರಿಂದ 8(iv–ಎ) ರಲ್ಲಿನ ಯಾವುದಾದರೂ ಒಂದು 'ಲಘು ದಂಡನೆ' ವಿಧಿಸುವುದು ಸೂಕ್ತವೆಂದು ಆಯೋಗ ಅಭಿಪ್ರಾಯಪಡುತ್ತದೆ. ಹಾಗೆಯೇ ಪ್ರಕರಣದಲ್ಲಿ ಆಪಾದಿತರಲ್ಲೊಬ್ಬರಾದ ಶ್ರೀ ಶ್ರೀನಿವಾಸ್, ಶಿರಸ್ತೇದಾರ್ ಇವರು ಸೇವೆಯಿಂದ ನಿವೃತ್ತರಾಗಿರುವುದರಿಂದ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಂತೆ ದಂಡನೆ ವಿಧಿಸಬೇಕಾಗಿದ್ದು, ಪ್ರಸ್ತುತ ಸೇವೆಯಲ್ಲಿರುವ ಆಪಾದಿತರಿಗೆ ವಿಧಿಸಬಹುದಾದ ದಂಡನೆಯನ್ನು ಸರ್ಕಾರವೇ ನಿರ್ಧರಿಸಿ ಪ್ರತ್ಯೇಕ ಪ್ರಸ್ತಾವನೆಯನ್ನು ಆಯೋಗಕ್ಕೆ ಕಳುಹಿಸುವಂತೆ ಕೋರಿರುತ್ತದೆ. ಲೋಕಸೇವಾ ಆಯೋಗವು ನೀಡಿರುವ ಸಹಮತಿಯನ್ವಯ ಸರ್ಕಾರವು ಪರಿಶೀಲಿಸಿ, ಈ ಪ್ರಕರಣದಲ್ಲಿ ಭಾಗಿಯಾಗಿರುವ ಅಧಿಕಾರಿ/ನೌಕರರ ವಿರುದ್ಧ ದಂಡನೆ ನಿರ್ಧರಿಸಿ ಮೇಲೆ ಓದಲಾದ ಕ್ರ.ಸಂ. (10) ದಿನಾಂಕ: 01–06–2009ರ ಆದೇಶದಲ್ಲಿ ಈ ಕೆಳಕಂಡಂತೆ ದಂಡನೆ ವಿಧಿಸಿ ಆದೇಶಿಸಲಾಗಿರುತ್ತದೆ.

4 ಶ್ರೀ ದಾದಾರಾವ್, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಬಿ.ಎಂ.ಟಿ.ಎಫ್. ಬೆಂಗಳೂರು– ಇವರಿಗೆ ವಾಗ್ದಂಡನೆ.

5 ಶ್ರೀ ಗಂಗಯ್ಯ ಹಿಂದಿನ ಕಂದಾಯ ನಿರೀಕ್ಷಕರು – ಇವರಿಗೆ ಒಂದು ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮ ಬೀರದಂತೆ ಒಂದು ವರ್ಷದವರೆಗೆ ತಡೆಹಿಡಿಯುವ ದಂಡನೆ.

6 ಶ್ರೀ ಎ. ಶಿವರಾಜ್, ಹಿಂದಿನ ಬೆರಳಚ್ಚುಗಾರರು – ಇವರಿಗೆ ಒಂದು ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮ ಬೀರದಂತೆ ಒಂದು ವರ್ಷದವರೆಗೆ ತಡೆಹಿಡಿಯುವ ದಂಡನೆ.

7 ಶ್ರೀ ಶ್ರೀನಿವಾಸ್, ಹಿಂದಿನ ಶಿರಸ್ತೇದಾರ್ – ಇವರು ಈಗಾಗಲೇ ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಇವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214ರಡಿಯಲ್ಲಿ ದಂಡನೆ ವಿಧಿಸಲು ಪ್ರತ್ಯೇಕವಾಗಿ ಕ್ರಮಕೈಗೊಳ್ಳಲಾಗುತ್ತದೆ.

ಪ್ರಸ್ತುತ ಸರ್ಕಾರವು ಮೇಲ್ಕಂಡ ಕ್ರ.ಸಂ. (4) – ಶ್ರೀ ಶ್ರೀನಿವಾಸ್, ಹಿಂದಿನ ಶಿರಸ್ತೇದಾರ್ – ಇವರು ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಅವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214ರಡಿಯಲ್ಲಿ ದಂಡನೆ ವಿಧಿಸುವ ಕುರಿತಂತೆ ಶ್ರೀಯುತರ ನಿವೃತ್ತಿ ವೇತನದಿಂದ ಶೇಕಡ 10ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಆಯೋಗದ ಸಹಮ್ಮತಿಯನ್ನು ಸರ್ಕಾರದ ಪತ್ರದ ದಿನಾಂಕ: 10–06–2009ರಲ್ಲಿ ಕೋರಲಾಗಿತ್ತು. ಮೇಲೆ ಓದಲಾದ ಕ್ರ.ಸಂ.(11) ದಿನಾಂಕ: 23–07–09ರಲ್ಲಿ ಲೋಕಸೇವಾ ಆಯೋಗವು ಶ್ರೀ ಶ್ರೀನಿವಾಸ್, ನಿವೃತ್ತ ಶಿರಸ್ತೇದಾರ್ ಇವರ ನಿವೃತ್ತಿ ವೇತನದಿಂದ ಸರ್ಕಾರವು ತೀರ್ಮಾನಿಸಿರುವ ಶೇ. 10ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಗೆ ಬದಲಾಗಿ ಶೇ. 10 ರಷ್ಟನ್ನು 2 ವರ್ಷಗಳ ಅವಧಿಯವರೆಗೆ ತಡೆಹಿಡಿಯುವ ಪರಿಷ್ಕೃತ ದಂಡನೆಯನ್ನು ವಿಧಿಸಲು ಶಿಫಾರಸ್ಸು ಮಾಡಿರುವುದರಿಂದ ಸರ್ಕಾರವು ಶ್ರೀ ಶ್ರೀನಿವಾಸ್, ಹಿಂದಿನ ಶಿರಸ್ತೇದಾರ್ ಕೋಲಾರ ತಾಲ್ಲೂಕು ಕಛೇರಿ ಪ್ರಸ್ತುತ ನಿವೃತ್ತ ಇವರಿಗೆ ಈ ಕೆಳಕಂಡ ದಂಡನೆ ವಿಧಿಸಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2004, ಬೆಂಗಳೂರು, ದಿನಾಂಕ: 21ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಪ್ರಸ್ತುತ ಪ್ರಕರಣದಲ್ಲಿ ಭಾಗಿಯಾಗಿದ್ದ ಶ್ರೀ ಶ್ರೀನಿವಾಸ್ ಹಿಂದಿನ ಶಿರಸ್ತೇದಾರ್ ಕೋಲಾರ ತಾಲ್ಲೂಕು ಕಛೇರಿ (ಪ್ರಸ್ತುತ ನಿವೃತ್ತ) ಇವರ ವಿರುದ್ಧ ಆರೋಪವು ಸಾಬೀತಾಗಿದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಅವರ ನಿವೃತ್ತಿ ವೇತನದಿಂದ ಶೇ. 10ರಷ್ಟನ್ನು 2 ವರ್ಷಗಳ ಅವಧಿಯವರೆಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2771

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು–3)

## ವಸತಿ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲೆ, ಕೋಲಾರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1999, ದಿನಾಂಕ: 10–05–2000.

2) ಸರ್ಕಾರದ ಆದೇಶ ಸಂ.ವಇ/18/ಹೆಚ್‌ಎಎಸ್/2008, ದಿನಾಂಕ: 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಕೋಲಾರ ಜಿಲ್ಲೆ ಕೋಲಾರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂ.ವಇ 44 ಹೆಚ್‌ಎಎಸ್ 2008, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2009**

ಕೋಲಾರ ಜಿಲ್ಲೆ, ಕೋಲಾರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | **ಅಭ್ಯರ್ಥಿಯ ಹೆಸರು** | **ವರ್ಗ** |
|---|---|---|
| 1. | ಶ್ರೀಮತಿ ಶಶಿಕಲಾ ಕೋಂ ನಾರಾಯಣಸ್ವಾಮಿ,<br>1ನೇ ಕ್ರಾಸ್, ಕಾರಂಜಿ ಕಟ್ಟೆ, ಕೋಲಾರ | ಪರಿಶಿಷ್ಟ ಜಾತಿ (ಮಹಿಳೆ) |
| 2. | ಶ್ರೀ ಸಂಜಯ್ ಜಾದವ್ ಬಿನ್, ಕೆ. ಯಶವಂತ್<br>ನಂ. 310, ಮೆಕ್ಕೆವರತ್ತ, ಶ್ರೀನಿವಾಸಪುರ ರಸ್ತೆ, ಗಲ್ಪೇಟೆ ಕೋಲಾರ. | ಹಿಂದುಳಿದ ವರ್ಗ |
| 3. | ಶ್ರೀ ನಾಸೀರ್‌ಖಾನ್ ಬಿನ್ ಆರೀಫ್‌ಖಾನ್,<br>ಜ್ಯೋತಿ ಓಂ ಇಂಡಸ್ಟ್ರೀಸ್ ಗಣೇಶ್ ಬೀಡಿ ಫ್ಯಾಕ್ಟರಿ,<br>ಮಹಾಲಕ್ಷ್ಮೀ ಬಡಾವಣೆ, ಬೈಪಾಸ್ ಕೋಲಾರ. | ಅಲ್ಪಸಂಖ್ಯಾತರು |
| 4. | ಶ್ರೀ ನರಸಿಂಹಮೂರ್ತಿ ಬಿನ್ ಪಿ. ನಾರಾಯಣಪ್ಪ,<br>ಕೀಲುಕೋಟೆ, ಅಂತರಗಂಗೆ ರಸ್ತೆ, ಕೋಲಾರ. | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2772

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಕೋಲಾರ ಜಿಲ್ಲೆ, ಶ್ರೀನಿವಾಸಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1999, ದಿನಾಂಕ: 10–05–2000.

2) ಸರ್ಕಾರದ ಆದೇಶ ಸಂ.ವಇ/18/ಹೆಚ್ಎಎಸ್/2008, ದಿನಾಂಕ: 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಕೋಲಾರ ಜಿಲ್ಲೆ ಶ್ರೀನಿವಾಸಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂ.ವಇ 42 ಹೆಚ್ಎಎಸ್ 2008, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2009**

ಕೋಲಾರ ಜಿಲ್ಲೆ, ಶ್ರೀನಿವಾಸಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | **ಅಭ್ಯರ್ಥಿಯ ಹೆಸರು** | **ವರ್ಗ** |
|---|---|---|
| 1. | ಶ್ರೀ. ಎಂ ಶಂಕರಪ್ಪ ಬಿನ್, ಎನ್. ನಾರಾಯಣ, ಸುಗಟೂರು (ಗ್ರಾ.ಅಂ) ಕೋಲಾರ ತಾಲ್ಲೂಕು, ಶ್ರೀನಿವಾಸಪುರ ತಾಲ್ಲೂಕು | ಸಾಮಾನ್ಯ |
| 2. | ಶ್ರೀ ಶಿವಣ್ಣ ಬಿನ್ ಈಸಪ್ಪ, ವಲ್ಲಬಾಯಿ ರಸ್ತೆ, ಶ್ರೀನಿವಾಸಪುರ. | ಪರಿಶಿಷ್ಟ ಪಂಗಡ |
| 3. | ಶ್ರೀ ಹೆಚ್. ಅಕ್ರಮ್‌ಪಾಷ ಬಿನ್ ಅಬ್ದುಲ್ ಸುಬಾನ್ ಸಾಬ್, ಹೆಬ್ಬಟ ಕಸಬಾ ಹೋಬಳಿ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ. | ಅಲ್ಪಸಂಖ್ಯಾತರು |
| 4. | ಶ್ರೀಮತಿ ಶಾರದಮ್ಮ ಕೋಂ ಕೊವಪ್ಪ, ಸೋಮಸಂದ್ರ ಗ್ರಾಮ, ಹೇಳೂರು ಹೋಬಳಿ, ಕೋಲಾರ ತಾ|| | ಹಿಂದುಳಿದ ವರ್ಗ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2773

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಮಂಡ್ಯ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1999, ದಿನಾಂಕ: 10–05–2000.

2) ಸರ್ಕಾರದ ಆದೇಶ ಸಂ.ವಇ/18/ಹೆಚ್ಎಎಸ್/2008, ದಿನಾಂಕ: 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಮಂಡ್ಯ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂ.ವಇ 44 ಹೆಚ್ಎಎಸ್ 2009, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2009**

ಮಂಡ್ಯ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | **ಅಭ್ಯರ್ಥಿಯ ಹೆಸರು** | **ವರ್ಗ** |
|---|---|---|
| 1. | ಶ್ರೀ ಭವಾನಿಸಿಂಗ್ ಬಿನ್ ಮೆನುಗು ಸಿಂಗ್, ಸುಭಾಷ್ ನಗರ ಮಂಡ್ಯ. | ಅಲ್ಪಸಂಖ್ಯಾತರು |
| 2. | ಶ್ರೀಮತಿ ಸುಕನ್ಯಾ ಕೋಂ ಕೋಣೇಗೌಡ, ಗೋಪಾಲಪುರ, ಮಂಡ್ಯ ತಾ|| | ಸಾಮಾನ್ಯ (ಮಹಿಳೆ) |
| 3. | ಶ್ರೀಮತಿ ನಾಗಮಣಿ ಡಿ. ಕೋಂ ಎಸ್ ದೇವರಾಜ್, ಭೋವಿ ಕಾಲೋನಿ, ಮಂಡ್ಯ. | ಪರಿಶಿಷ್ಟ ಜಾತಿ |
| 4. | ಶ್ರೀ ನಾಗರಾಜು ಎಸ್.ಹೆಚ್. ಬಿನ್ ಹುಚ್ಚಪ್ಪ ಹೆಗ್ಗಡೆ, ಸಾತನೂರು, ಮಂಡ್ಯ. | ಹಿಂದುಳಿದ ವರ್ಗ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2774

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಚಿಕ್ಕಮಗಳೂರು ಜಿಲ್ಲೆ, ಶೃಂಗೇರಿ ಮತ್ತು ಕೊಪ್ಪ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/1999, ದಿನಾಂಕ: 10–05–2000.

2) ಸರ್ಕಾರದ ಆದೇಶ ಸಂ.ವಇ/18/ಹೆಚ್‌ಎಎಸ್/2008, ದಿನಾಂಕ: 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಚಿಕ್ಕಮಗಳೂರು ಜಿಲ್ಲೆ, ಶೃಂಗೇರಿ ಮತ್ತು ಕೊಪ್ಪ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂ.ವಇ 71 ಹೆಚ್‌ಎಎಸ್ 2009, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2009**

1) ಚಿಕ್ಕಮಗಳೂರು ಜಿಲ್ಲೆ, ಶೃಂಗೇರಿ ತಾಲ್ಲೂಕು ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | **ಅಭ್ಯರ್ಥಿಯ ಹೆಸರು** | **ವರ್ಗ** |
|---|---|---|
| 1. | ಶ್ರೀ ದಿನೇಶ್, ಯು.ಎಸ್.ಬಿನ್ ಯು.ಎಂ. ಸುಬ್ರಾವ್, ಮಲ್ಲಿಕಾರ್ಜುನ ಬೀದಿ, ಶೃಂಗೇರಿ, | ಸಾಮಾನ್ಯ |
| 2. | ಶ್ರೀ ರಾಘವೇಂದ್ರ ಎನ್. ಬಿನ್ ನರಸಿಂಹ, ಸುಭಾಶ್ ಬೀದಿ, ಶೃಂಗೇರಿ. | ಪರಿಶಿಷ್ಟ ಪಂಗಡ |
| 3. | ಶ್ರೀ ರತ್ನಾಕರ ಬಿನ್ ರಾಮೇಗೌಡ, ಹನುಮಂತನಗರ, ಶೃಂಗೇರಿ. | ಹಿಂದುಳಿದ ವರ್ಗ |
| 4. | ಡಾ॥ ಭುವನೇಶ್ವರಿ ಬಲ್ಲಾಳ್ ಕೋಂ ಡಾ॥ ನಿರಂಜನ್, ಶಾರದ ಕ್ಲಿನಿಕ್, ಭಾರತೀ ಬೀದಿ ಶೃಂಗೇರಿ. | ಅಲ್ಪಸಂಖ್ಯಾತರು (ಮಹಿಳೆ) |

2) ಚಿಕ್ಕಮಗಳೂರು ಜಿಲ್ಲೆ, ಕೊಪ್ಪ ತಾಲ್ಲೂಕು ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | **ಅಭ್ಯರ್ಥಿಯ ಹೆಸರು** | **ವರ್ಗ** |
|---|---|---|
| 1. | ಶ್ರೀ ಉದಯ ಕುಮಾರ್ ಜೈನ್ ಬಿನ್ ಶ್ರೀ ಚಂದ್ರರಾಜ ಹೆಗಡೆ, ಮಹಾವೀರ ಮೇಟಲ್ಸ್, ತಿಲಕ್ ರಸ್ತೆ, ಕೊಪ್ಪ ಅಂಚೆ, ತಾ॥ ಚಿಕ್ಕಮಗಳೂರು ಜಿಲ್ಲೆ. | ಅಲ್ಪಸಂಖ್ಯಾತರು. |
| 2. | ಶ್ರೀ ಲೋಕೇಶ್ ಯು.ವಿ. ಬಿನ್ ಶ್ರೀ ವಾಸದೇವ ರಾವ್, ಕನ್ನದಾಂಭ ಬೇಕರಿ, ಜೆ.ಎಂ.ಜೆ. ಟಾಕೀಸ್ ರಸ್ತೆ, ಕೊಪ್ಪ ಅಂಚೆ, ಚಿಕ್ಕಮಗಳೂರು ಜಿಲ್ಲೆ. | ಹಿಂದುಳಿದ ವರ್ಗ |
| 3. | ಶ್ರೀಮತಿ ವಿಜಯಲಕ್ಷ್ಮಿ ಕೋಂ ಶ್ರೀ ಕೃಷ್ಣ, ವಿದ್ಯಾನಗರ, ಮೇಲಿನ ಪೇಟೆ, ಕೊಪ್ಪ ಅಂಚೆ ಮತ್ತು ತಾ॥, ಚಿಕ್ಕಮಗಳೂರು ಜಿಲ್ಲೆ. | ಸಾಮಾನ್ಯ (ಮಹಿಳೆ) |
| 4. | ಶ್ರೀ ಶಂಕರ ಬಿನ್ ಶ್ರೀ ಸಿದ್ದಯ್ಯ, ಇಂದಿರಾ ನಗರ, ಕೊಪ್ಪ ಅಂಚೆ ಮತ್ತು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. | ಪರಿಶಿಷ್ಟ ವರ್ಗ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2775

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಬಳ್ಳಾರಿ ಜಿಲ್ಲೆ, ಹೊಸಪೇಟೆ ಕ್ಷೇತ್ರದ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/1999, ದಿನಾಂಕ: 10–05–2000.

2) ಸರ್ಕಾರದ ಆದೇಶ ಸಂ.ವಇ/18/ಹೆಚ್‌ಎಎಸ್/2008, ದಿನಾಂಕ: 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಬಳ್ಳಾರಿ ಜಿಲ್ಲೆ, ಹೊಸಪೇಟೆ ಕ್ಷೇತ್ರದ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂ.ವಇ 29 ಹೆಚ್‌ಎಎಸ್ 2009, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2009**

ಬಳ್ಳಾರಿ ಜಿಲ್ಲೆ, ಹೊಸಪೇಟೆ ಕ್ಷೇತ್ರದ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | **ಅಭ್ಯರ್ಥಿಯ ಹೆಸರು** | **ವರ್ಗ** |
|---|---|---|
| 1. | ಶ್ರೀಮತಿ ರೇಖಾಮಣಿ ಬಿನ್ ಬಸವರಾಜ,<br>11ನೇ ವಾರ್ಡ್ ನೆಹರು ಕಾಲೋನಿ, ಹೊಸಪೇಟೆ. | ಸಾಮಾನ್ಯ (ಮಹಿಳೆ) |
| 2. | ಶ್ರೀ ಅಬೀಬುಲ್ಲ ಡಾಕ್ಟರ್ ಬಿನ್ ಲೇ॥ ಅಬ್ದುಲ್ ಕರೀಂ,<br>ಬಳ್ಳಾರಿ ರಸ್ತೆ, ಹೊಸಪೇಟೆ. | ಅಲ್ಪಸಂಖ್ಯಾತರು. |
| 3. | ಶ್ರೀ ವಲೀನಾಯಕ್, ಬಿನ್ ತೋಟಾ ನಾಯಕ್,<br>ಕಲ್ಲಳ್ಳಿ ಗ್ರಾಮ, ಹೊಸಪೇಟೆ. | ಪರಿಶಿಷ್ಟ ಜಾತಿ |
| 4. | ಶ್ರೀ ಭರ್ಮಲಿಂಗಪ್ಪ ಬಿನ್ ಅಗಲೂರಪ್ಪ, ಕಮಲಾಪುರ,<br>ಹೊಸಪೇಟೆ ತಾಲ್ಲೂಕು. | ಹಿಂದುಳಿದ ವರ್ಗ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2776

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ತುಮಕೂರು ಜಿಲ್ಲೆ, ತಿಪಟೂರು ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1999, ದಿನಾಂಕ: 10–05–2000.

2) ಸರ್ಕಾರದ ಆದೇಶ ಸಂ.ವಇ/18/ಹೆಚ್‌ಎಎಸ್/2008, ದಿನಾಂಕ: 16–09–2009.

**ಪ್ರಸ್ತಾವನೆ:**

ಸಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ತುಮಕೂರು ಜಿಲ್ಲೆ, ತಿಪಟೂರು ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂ.ವಇ 64 ಹೆಚ್‌ಎಎಸ್ 2009, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2009**

ತುಮಕೂರು ಜಿಲ್ಲೆ, ತಿಪಟೂರು ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | **ಅಭ್ಯರ್ಥಿಯ ಹೆಸರು** | **ವರ್ಗ** |
|---|---|---|
| 1. | ಶ್ರೀ ಕುಮಾರಾಚಾರ್ ಬಿನ್ ಕೆಂಪಾಚಾರ್,<br>ವಿಶ್ವಕರ್ಮ ಜ್ಯುವೆಲರಿ  ವರ್ಕ್ಸ್, ದೊಡ್ಡಪೇಟೆ, ತಿಪಟೂರು | ಸಾಮಾನ್ಯ |
| 2. | ಶ್ರೀಮತಿ ಶೋಭಾರಾಣಿ ಕೋಂ ವಿ.ಸಿ. ಪ್ರಭಾಕರ್,<br>1ನೇ ಮುಖ್ಯ ರಸ್ತೆ, ಪಾಂಡುರಂಗ ಬಿಲ್ಡಿಂಗ್, ಗಾಂಧಿನಗರ, ತಿಪಟೂರು. | ಹಿಂದುಳಿದ ವರ್ಗ<br>(ಮಹಿಳೆ) |
| 3. | ಶ್ರೀ ಹೊನ್ನಯ್ಯ ಬಿನ್ ಚಿಕ್ಕಣ್ಣ,<br>ಕಂಚಘಟ್ಟ ಕಾಲೋನಿ, ತಿಪಟೂರು. | ಪರಿಶಿಷ್ಟ ಜಾತಿ |
| 4. | ಶ್ರೀ ನಾಗರಾಜ ಹೆಚ್.ಬಿ. ಬಿನ್ ಪಾರ್ಶ್ವನಾಥ್,<br>ನಂ. 1094, ಬಸವಣ್ಣಪ್ಪ ಕಾಂಪೌಂಡ್, ಬಿ.ಹೆಚ್. ರಸ್ತೆ, ತಿಪಟೂರು. | ಅಲ್ಪಸಂಖ್ಯಾತರು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2777

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಕೋಲಾರ ಜಿಲ್ಲೆ, ಬಂಗಾರಪೇಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1999, ದಿನಾಂಕ: 10–05–2000.

2) ಸರ್ಕಾರದ ಆದೇಶ ಸಂ.ವಇ/18/ಹೆಚ್ಎಸ್/2008, ದಿನಾಂಕ: 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಕೋಲಾರ ಜಿಲ್ಲೆ, ಬಂಗಾರಪೇಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂ.ವಇ 48 ಹೆಚ್ಎಸ್ 2008, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2009**

ಕೋಲಾರ ಜಿಲ್ಲೆ, ಬಂಗಾರಪೇಟೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀಮತಿ ಕುಸುಮ ಕೋಂ ಹೆಚ್.ಕೆ. ನಂಜುಂಡಯ್ಯ<br>4591, ಅಮರಾವತಿ ನಗರ, ಬಂಗಾರಪೇಟೆ, | ಸಾಮಾನ್ಯ (ಮಹಿಳೆ) |
| 2. | ಶ್ರೀ ಮುರಳಿ ಬಿನ್ ಟಿ. ವೆಂಕಟಪ್ಪ,<br>ವಿವೇಕಾನಂದ ಮುಖ್ಯ ರಸ್ತೆ, ಬಂಗಾರಪೇಟೆ. | ಹಿಂದುಳಿದ ವರ್ಗ |
| 3. | ಶ್ರೀ ಕೆ.ಎಂ. ನಾರಾಯಣಸ್ವಾಮಿ ಬಿನ್ ಮುನಿಯಪ್ಪ<br>4701, ಎಂ.ವಿ.ಐ. ರಸ್ತೆ, ವಿಜಯನಗರ, ಬಂಗಾರಪೇಟೆ. | ಪರಿಶಿಷ್ಟ ಜಾತಿ |
| 4. | ಶ್ರೀ ಆರ್. ಸುಭಾನ್ ಬಿನ್ ಅಬ್ದುಲ್ ರೆಹಮಾನ್,<br>ರಾಜೇಂದ್ರ ಬಡಾವಣೆ, ಬಂಗಾರಪೇಟೆ. | ಅಲ್ಪಸಂಖ್ಯಾತರು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2778

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಕೋಲಾರ ಜಿಲ್ಲೆ, ಮುಳಬಾಗಿಲು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1999, ದಿನಾಂಕ: 10–05–2000.

2) ಸರ್ಕಾರದ ಆದೇಶ ಸಂ.ವಇ/18/ಹೆಚ್ಎಸ್/2008, ದಿನಾಂಕ: 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಕೋಲಾರ ಜಿಲ್ಲೆ, ಮುಳಬಾಗಿಲು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂ.ವಇ 43 ಹೆಚ್ಎಸ್ 2008, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2009**

ಕೋಲಾರ ಜಿಲ್ಲೆ, ಮುಳಬಾಗಿಲು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ಹರೀಶ್ ಬಿನ್ ಸಂಪತ್ ಕುಮಾರ್,<br>ಮೇಲಿನ ಅಗ್ರಹಾರ, ಮುಳಬಾಗಿಲು ಟೌನ್, ಮುಳಬಾಗಿಲು. | ಸಾಮಾನ್ಯ |
| 2. | ಶ್ರೀ ಕೋಳಿ ನಾಗರಾಜ್ ಬಿನ್ ಹನುಮಪ್ಪ,<br>ಕುರುಬರಪಾಳ್ಯ, ಮುಳಬಾಗಿಲು ಟೌನ್ ಮುಳಬಾಗಿಲು | ಹಿಂದುಳಿದ ವರ್ಗ |
| 3. | ಶ್ರೀ ಭೀಮೇಶ್ವರ್ ಬಿನ್ ರಾಮಲಕ್ಷ್ಮಯ್ಯ,<br>2ನೇ ಕ್ರಾಸ್ ತಾತಪಾಳ್ಯ, ಮುಳಬಾಗಿಲು | ಅಲ್ಪಸಂಖ್ಯಾತರು |

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 4. | ಶ್ರೀಮತಿ ಜಯಮ್ಮ ಕೋಂ ವೆಂಕಟರಮಣಪ್ಪ, ಎ.ಡಿ. ಪಾಳ್ಯ ಮುಳಬಾಗಿಲು ಟೌನ್, ಮುಳಬಾಗಿಲು. | ಪರಿಶಿಷ್ಟ ಜಾತಿ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2779

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1)(ಬಿಬಿ)ರ ಪ್ರಕಾರ ಕರ್ನಾಟಕದಲ್ಲಿ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಎರಡು ವರ್ಷದ ಅವಧಿಗೆ ನೇಮಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಅಪಜೀ 198 ಎಫ್‌ಡಬ್ಲ್ಯೂಎಲ್ 2006, ದಿನಾಂಕ: 20–02–2007.

2) ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು, ಇವರ ಪತ್ರ ಸಂಖ್ಯೆ: ಸಿ1/ಸಿಡಬ್ಲ್ಯೂಎಲ್–ಸಿಆರ್–28/2005–06 ದಿನಾಂಕ:01.09.2009 ಮತ್ತು 07–09–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 20–02–2007ರ ಆದೇಶದಲ್ಲಿ ರಾಜ್ಯದಲ್ಲಿ ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1)(ಬಿಬಿ)ರ ಪ್ರಕಾರ ಸರ್ಕಾರವು ಎರಡು ವರ್ಷದ ಅವಧಿಗೆ ಗೌರವ ವನ್ಯಜೀವಿ ಪರಿಪಾಲಕರನ್ನು ನೇಮಕ ಮಾಡಿದೆ. ಈಗ ಮೇಲೆ (2)ರಲ್ಲಿ ಓದಲಾದ ದಿನಾಂಕ: 07–09–2009ರ ಪತ್ರದಲ್ಲಿ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು, ಕೆಳಕಂಡವರನ್ನು ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಎರಡು ವರ್ಷದ ಅವಧಿಗೆ ನೇಮಕಾತಿ ಮಾಡಿ ಆದೇಶ ಹೊರಡಿಸಲು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಗೌರವ ವನ್ಯಜೀವಿ ಪರಿಪಾಲಕರ ಹೆಸರು ಮತ್ತು ವಿಳಾಸ | ನೇಮಕಾತಿ ಜಿಲ್ಲೆ |
|---|---|---|
| 1. | ಡಾ: ಎಂ.ಆರ್. ದೇಸಾಯಿ,<br>ಯಾದಹಳ್ಳಿ ಬೀಳಗಿ ತಾಲ್ಲೂಕು, ಬಾಗಲಕೋಟೆ–587 117 | ಬಾಗಲಕೋಟೆ |
| 2. | ಶ್ರೀ ಶರತ್ ಬಾಬು<br>ನಂ. 555, 10ನೇ 'ಸಿ' ಮುಖ್ಯ ರಸ್ತೆ, 6ನೇ ಬ್ಲಾಕ್,<br>ರಾಜಾಜಿ ನಗರ, ಬೆಂಗಳೂರು–560010 | ಬೆಂಗಳೂರು ನಗರ |
| 3. | ಶ್ರೀ ಹರಿಸೋಮಶೇಖರ್,<br>ನಂ. 93, 2ನೇ ಕ್ರಾಸ್, ಸೆಂಟ್ರಲ್ ಎಕ್ಸೈಸ್ ಲೇಔಟ್,<br>ವಿಜಯನಗರ, ಬೆಂಗಳೂರು–40. | ಬೆಂಗಳೂರು ಗ್ರಾಮಾಂತರ |
| 4. | ಶ್ರೀಹರಿ ಕುಗಜಿ (ಪರ್ಯಾವರಣಿ)<br>ನಂ. 78/25ನೇ ಕ್ರಾಸ್, ಆದರ್ಶನಗರ, ಹಿಂದವಾಡಿ, ಬೆಳಗಾವಿ. | ಬೆಳಗಾವಿ |
| 5. | ಶ್ರೀ ಸಂತೋಷ್ ಮಾರ್ಟಿನ್,<br>ನಂ.7, ಬ್ರೂಸ್ ಪೇಟೆ, ಬಳ್ಳಾರಿ–583 107 | ಬಳ್ಳಾರಿ |
| 6. | ಡಾ: ಸಂಜೀವ ರೆಡ್ಡಿ,<br>ವನ್ಯಜೀವಿ ಸಂಶೋಧಕರು, ಪ್ರಾಧ್ಯಾಪಕರು, ಕರ್ನಾಟಕ<br>ಆರ್ಟ್ಸ್ ಅಂಡ್ ಸೈನ್ಸ್ ಕಾಲೇಜ್, ಬೀದರ್–585401 | ಬೀದರ್ |
| 7. | ಡಾ: ಓಂಕಾರ ಕಾಕಡೆ,<br>ಡೀನ್, ಜರ್ನಲಿಸಮ್ ವಿಭಾಗ, ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ. | ಬಿಜಾಪುರ |

| ಕ್ರಮ ಸಂಖ್ಯೆ | ಗೌರವ ವನ್ಯಜೀವಿ ಪರಿಪಾಲಕರ ಹೆಸರು ಮತ್ತು ವಿಳಾಸ | ನೇಮಕಾತಿ ಜಿಲ್ಲೆ |
|---|---|---|
| 8. | ಶ್ರೀ ಜಿ. ಮಲ್ಲೇಶಪ್ಪ,<br>ಚೇರ್ಮನ್, ಸ್ವಾಮಿ ವಿವೇಕಾನಂದ ಸೇವಾ ಟ್ರಸ್ಟ್,<br>ಬಿಳಿಗಿರಿರಂಗನ ಬೆಟ್ಟ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ. | ಚಾಮರಾಜನಗರ |
| 9. | ಶ್ರೀ ಜಿ.ಟಿ. ಬಸವರಾಜ್,<br>ವಕೀಲರು ಉಜ್ಜನಿಮಠದ ರಸ್ತೆ, ರಂಗಯ್ಯನಬಾಗಿಲು<br>ಹತ್ತಿರ, ಚಿತ್ರದುರ್ಗ. | ಚಿತ್ರದುರ್ಗ |
| 10. | ಶ್ರೀ ರಾಜೇಂದ್ರ ಹಸ್‌ಭಾವಿ,<br>ನಂ. 537/5, ಹಸ್‌ಭಾವಿ ಕೊಟ್ರಪ್ಪ ರೆಸಿಡೆನ್ಸ್, ಹಸ್‌ಭಾವಿ ಸರ್ಕಲ್<br>ದಾವಣಗೆರೆ–577 001 | ದಾವಣಗೆರೆ |
| 11. | ಡಾ: ಪಿ.ವಿ. ಗೌಡ,<br>ಸಸ್ಯ–ಪ್ರಾಣಿ ಶಾಸ್ತ್ರಜ್ಞರು, ಪ್ರಿನ್ಸಿಪಾಲ್, ಎಂಜಿಎಂ ಕಾಲೇಜು, ಉಡುಪಿ. | ಉಡುಪಿ |
| 12. | ಶ್ರೀ ಗಂಗಾಧರ ಕಲ್ಲೂರು,<br>ವನ್ಯಜೀವಿ ಕಾರ್ಯಕರ್ತರು, ಪ್ರಾಧ್ಯಾಪಕರು, ಬಾಲಬಳಗ,<br>ಪೈವಾಕ್‌ಗೆಸ್ಟ್ ಹೌಸ್ ಹತ್ತಿರ ಧಾರವಾಡ. | ಧಾರವಾಡ |
| 13. | ಪೂಜ್ಯ ನಂದಿಮಠ ಸ್ವಾಮೀಜಿ, ಕಪ್ಪದಗುಡ್ಡ, ಗದಗ್ ಜಿಲ್ಲೆ | ಗದಗ್ |
| 14. | ಡಾ: ಕಟೆಪಾಗ ವಿಜಯ್‌ಕುಮಾರ್,<br>ಎನ್ವಿರಾನ್‌ಮೆಂಟಲ್ ಬಯಲಾಜಿ ರೀಸರ್ಚ್ ಯುನಿಟ್<br>ಡಿಪಾರ್ಟ್‌ಮೆಂಟ್ ಆಫ್ ಜ್ಯೂಯಾಲಜಿ, ಗುಲ್ಬರ್ಗಾ<br>ಯುನಿವರ್‌ಸಿಟಿ, ಗುಲ್ಬರ್ಗಾ – 585106 | ಗುಲ್ಬರ್ಗಾ |
| 15. | ಶ್ರೀ ಹೆಚ್.ಪಿ. ಮೋಹನ್, ಎಂ.ಎಸ್ಸಿ(ಅಗ್ರಿ)<br>ನಂ. 117, ಹೇಮಾಲಯ, ರವೀಂದ್ರನಗರ್, ಹಾಸನ | ಹಾಸನ |
| 16. | ಶ್ರೀಮತಿ ಮಾಧುರಿ ಜೆ. ದೇವದಾರ್,<br>ದೇವದಾರ್ ಹಾಸ್ಪಿಟಲ್ ಕಾಂಪೌಂಡ್, ಸ್ಟೇಷನ್ ರಸ್ತೆ, ಹಾವೇರಿ– 581 110 | ಹಾವೇರಿ |
| 17. | ಶ್ರೀ ನಿರೇನ್ ಜೈನ್,<br>ಆರ್ಕಿಟಿಕ್ಟ್, ನೆಲಮಹಡಿ, ರತ್ನ ಅಪಾರ್ಟ್‌ಮೆಂಟ್, ಕದ್ರಿ,<br>ಮಂಗಳೂರು–575 002. | ಮಡಿಕೇರಿ |
| 18. | ಶ್ರೀ ಆರ್. ನಾರಾಯಣಸ್ವಾಮಿ,<br>ಬಿನ್ ಲೇಟ್ ರಾಮಯ್ಯ, ದ್ವಾರಸಂದ್ರ, ಕಲ್ಲೂರ್ ಪೋಸ್ಟ್, ಶ್ರೀನಿವಾಸಪುರ,<br>ಕೋಲಾರ ಜಿಲ್ಲೆ. | ಕೋಲಾರ |
| 19. | ಡಾ: ಕೆ.ಜಿ. ಕುಲಕರ್ಣಿ,<br>ಸ್ಟೇಷನ್ ರೋಡ್, ಕೊಪ್ಪಳ. | ಕೊಪ್ಪಳ |
| 20. | ಡಾ: ಬಿ.ಎಂ. ನಾಗಪ್ಪ, ಎಂ.ಎ., ಪಿಹೆಚ್.ಡಿ<br>ಇಂಟಿಗ್ರೇಟೆಡ್ ರೂರಲ್ ಅಂಡ್ ಅರ್ಬನ್ ಡೆವಲಪ್‌ಮೆಂಟ್ ಇನ್ಸ್‌ಟ್ಯೂಟ್<br>ಆಫ್ ಅಡ್ಮಿನ್ ಆಫೀಸರ್, ಬಿ.ಡಿ.ಒ ಆಫೀಸ್ ಹತ್ತಿರ, ಮೈಸೂರು ರಸ್ತೆ,<br>ಮಳವಳ್ಳಿ, ಮಂಡ್ಯ | ಮಂಡ್ಯ |

| ಕ್ರಮ ಸಂಖ್ಯೆ | ಗೌರವ ವನ್ಯಜೀವಿ ಪರಿಪಾಲಕರ ಹೆಸರು ಮತ್ತು ವಿಳಾಸ | ನೇಮಕಾತಿ ಜಿಲ್ಲೆ |
|---|---|---|
| 21. | ಶ್ರೀ ಮುತ್ತಣ್ಣ,<br>36/3, ಕಾವೇರಿ ನಿಲಯ, ಕಿರಿಜಾಜಿ ರೋಡ್, ಜೆ.ಎಂ.ಎಸ್. ಕೋರ್ಟ್‌ನ ಹಿಂಭಾಗ, ಹುಣಸೂರು, ಮೈಸೂರು, ಜಿಲ್ಲೆ. | ಮೈಸೂರು |
| 22. | ಪ್ರೊ: ಎಸ್. ಶ್ರೀವತ್ಸ,<br>#ಎಲ್/200, ನಿಜಲಿಂಗಪ್ಪ ಕಾಲೋನಿ, ರಾಯಚೂರು. | ರಾಯಚೂರು |
| 23. | ಶ್ರೀ ರವಿ ಹನಿಯಾ,<br>ಗ್ರಾಮ ಭಾರತಿ, ಹನಿಯಾ ಪೋಸ್ಟ್ ತಾ: ಹೊಸನಗರ, ಶಿವಮೊಗ್ಗ ಜಿಲ್ಲೆ. | ಶಿವಮೊಗ್ಗ |
| 24. | ಶ್ರೀ ಚಂದುಬಾಬು,<br>ಮಂಜು ಎಜೆನ್ಸೀಸ್, 2ನೇ ಕ್ರಾಸ್, ಮಂಡಿಪೇಟೆ, ತುಮಕೂರು. | ತುಮಕೂರು |
| 25. | ಶ್ರೀ ಜಿ.ಎನ್. ಅಶೋಕವರ್ದನ್,<br>ಅತ್ರಿ ಪುಸ್ತಕ ಭಂಡಾರ, ಬಲ್‌ಮಠ, ಮಂಗಳೂರು | ಮಂಗಳೂರು |
| 26. | ಶ್ರೀ ಬಾಲಚಂದ್ರ ಹೆಗಡೆ ಎಲ್.<br>ವನ್ಯಜೀವಿ ಅಧ್ಯಯನಕಾರರು, ದೇವಿಮನೆ, ನೀಲಕುಂದ ಪೋಸ್ಟ್, ಹೆಗ್ಗರಣಿ ಮಾರ್ಗ, ಶಿರಸಿ, ಉತ್ತರ ಕನ್ನಡ–581 331. | ಉತ್ತರ ಕನ್ನಡ |

ಆದ್ದರಿಂದ ಈ ಕೆಳಕಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 138 ಎಫ್‌ಡಬ್ಲ್ಯೂಎಲ್ 2009, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972, ಸೆಕ್ಷನ್ 4(1)(ಬಿಬಿ)ರ ಪ್ರಕಾರ ಈ ಕೆಳಕಂಡವರನ್ನು ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಅವರುಗಳ ಹೆಸರಿನ ಮುಂದೆ ತೋರಿಸಿರುವ ಜಿಲ್ಲೆಗಳಿಗೆ ಎರಡು ವರ್ಷದ ಅವಧಿಗೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ನೇಮಕ ಮಾಡಿದೆ.

| ಕ್ರಮ ಸಂಖ್ಯೆ | ಗೌರವ ವನ್ಯಜೀವಿ ಪರಿಪಾಲಕರ ಹೆಸರು ಮತ್ತು ವಿಳಾಸ | ನೇಮಕಾತಿ ಜಿಲ್ಲೆ |
|---|---|---|
| 1. | ಡಾ: ಎಂ.ಆರ್. ದೇಸಾಯಿ,<br>ಯಾದಹಳ್ಳಿ ಬೀಳಗಿ ತಾಲ್ಲೂಕು, ಬಾಗಲಕೋಟೆ–587 117 | ಬಾಗಲಕೋಟೆ |
| 2. | ಶ್ರೀ ಶರತ್ ಬಾಬು<br>ನಂ. 555, 10ನೇ 'ಸಿ' ಮುಖ್ಯ ರಸ್ತೆ, 6ನೇ ಬ್ಲಾಕ್,<br>ರಾಜಾಜಿ ನಗರ, ಬೆಂಗಳೂರು–560010 | ಬೆಂಗಳೂರು ನಗರ |
| 3. | ಶ್ರೀ ಹರಿಸೋಮಶೇಖರ್,<br>ನಂ. 93, 2ನೇ ಕ್ರಾಸ್, ಸೆಂಟ್ರಲ್ ಎಕ್ಸೈಸ್ ಲೇಔಟ್,<br>ವಿಜಯನಗರ, ಬೆಂಗಳೂರು–40. | ಬೆಂಗಳೂರು ಗ್ರಾಮಾಂತರ |
| 4. | ಶ್ರೀಹರಿ ಕುಗಜಿ (ಪರ್ಯಾವರಣಿ)<br>ನಂ. 78/25ನೇ ಕ್ರಾಸ್, ಆದರ್ಶನಗರ, ಹಿಂದವಾಡಿ, ಬೆಳಗಾವಿ. | ಬೆಳಗಾವಿ |
| 5. | ಶ್ರೀ ಸಂತೋಷ್ ಮಾರ್ಟಿನ್,<br>ನಂ.7, ಬ್ರೂಸ್ ಪೇಟೆ, ಬಳ್ಳಾರಿ–583 107 | ಬಳ್ಳಾರಿ |
| 6. | ಡಾ: ಸಂಜೀವ ರೆಡ್ಡಿ,<br>ವನ್ಯಜೀವಿ ಸಂಶೋಧಕರು, ಪ್ರಾಧ್ಯಾಪಕರು, ಕರ್ನಾಟಕ<br>ಆರ್ಟ್ಸ್ ಅಂಡ್ ಸೈನ್ಸ್ ಕಾಲೇಜ್, ಬೀದರ್–585401 | ಬೀದರ್ |

| ಕ್ರಮ ಸಂಖ್ಯೆ | ಗೌರವ ವನ್ಯಜೀವಿ ಪರಿಪಾಲಕರ ಹೆಸರು ಮತ್ತು ವಿಳಾಸ | ನೇಮಕಾತಿ ಜಿಲ್ಲೆ |
|---|---|---|
| 7. | ಡಾ: ಓಂಕಾರ ಕಾಕಡೆ,<br>ಡೀನ್, ಜರ್ನಲಿಸಮ್ ವಿಭಾಗ, ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ. | ಬಿಜಾಪುರ |
| 8. | ಶ್ರೀ ಜಿ. ಮಲ್ಲೇಶಪ್ಪ,<br>ಚೇರ್ಮನ್, ಸ್ವಾಮಿ ವಿವೇಕಾನಂದ ಸೇವಾ ಟ್ರಸ್ಟ್,<br>ಬಿಳಿಗಿರಿರಂಗನ ಬೆಟ್ಟ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ. | ಚಾಮರಾಜನಗರ |
| 9. | ಶ್ರೀ ಜಿ.ಟಿ. ಬಸವರಾಜ್,<br>ವಕೀಲರು ಉಜ್ಜನಿಮಠದ ರಸ್ತೆ, ರಂಗಯ್ಯನಬಾಗಿಲು<br>ಹತ್ತಿರ, ಚಿತ್ರದುರ್ಗ. | ಚಿತ್ರದುರ್ಗ |
| 10. | ಶ್ರೀ ರಾಜೇಂದ್ರ ಹಸ್‌ಭಾವಿ,<br>ನಂ. 537/5, ಹಸ್‌ಭಾವಿ ಕೊಟ್ರಪ್ಪ ರೆಸಿಡೆನ್ಸ್, ಹಸ್‌ಭಾವಿ ಸರ್ಕಲ್<br>ದಾವಣಗೆರೆ–577 001 | ದಾವಣಗೆರೆ |
| 11. | ಡಾ: ಪಿ.ವಿ. ಗೌಡ,<br>ಸಸ್ಯ–ಪ್ರಾಣಿ ಶಾಸ್ತ್ರಜ್ಞರು, ಪ್ರಿನ್ಸಿಪಾಲ್, ಎಂಜಿಎಂ ಕಾಲೇಜು, ಉಡುಪಿ. | ಉಡುಪಿ |
| 12. | ಶ್ರೀ ಗಂಗಾಧರ ಕಲ್ಲೂರು,<br>ವನ್ಯಜೀವಿ ಕಾರ್ಯಕರ್ತರು, ಪ್ರಾಧ್ಯಾಪಕರು, ಬಾಲಬಳಗ,<br>ಪೈವಾಕ್‌ಗೆಸ್ಟ್ ಹೌಸ್ ಹತ್ತಿರ ಧಾರವಾಡ. | ಧಾರವಾಡ |
| 13. | ಪೂಜ್ಯ ನಂದಿಮಠ ಸ್ವಾಮೀಜಿ, ಕಪ್ಪದಗುಡ್ಡ, ಗದಗ್ ಜಿಲ್ಲೆ | ಗದಗ್ |
| 14. | ಡಾ: ಕಟಿಪಾಗ ವಿಜಯ್‌ಕುಮಾರ್,<br>ಎನ್ವಿರಾನ್‌ಮೆಂಟಲ್ ಬಯಲಾಜಿ ರೀಸರ್ಚ್ ಯುನಿಟ್<br>ಡಿಪಾರ್ಟ್‌ಮೆಂಟ್ ಆಫ್ ಜ್ಯೂಯಾಲಜಿ, ಗುಲ್ಬರ್ಗಾ<br>ಯುನಿವರ್‌ಸಿಟಿ, ಗುಲ್ಬರ್ಗಾ – 585106 | ಗುಲ್ಬರ್ಗಾ |
| 15. | ಶ್ರೀ ಹೆಚ್.ಪಿ. ಮೋಹನ್, ಎಂ.ಎಸ್ಸಿ(ಅಗ್ರಿ)<br>ನಂ. 117, ಹೇಮಾಲಯ, ರವೀಂದ್ರನಗರ್, ಹಾಸನ | ಹಾಸನ |
| 16. | ಶ್ರೀಮತಿ ಮಾಧುರಿ ಜೆ. ದೇವದಾರ್,<br>ದೇವದಾರ್ ಹಾಸ್ಪಿಟಲ್ ಕಾಂಪೌಂಡ್, ಸ್ಟೇಷನ್ ರಸ್ತೆ, ಹಾವೇರಿ– 581 110 | ಹಾವೇರಿ |
| 17. | ಶ್ರೀ ನಿರೇನ್ ಜೈನ್,<br>ಆರ್ಕಿಟಿಕ್ಟ್, ನೆಲಮಹಡಿ, ರತ್ನ ಅಪಾರ್ಟ್‌ಮೆಂಟ್, ಕದ್ರಿ,<br>ಮಂಗಳೂರು–575 002. | ಮಡಿಕೇರಿ |
| 18. | ಶ್ರೀ ಆರ್. ನಾರಾಯಣಸ್ವಾಮಿ,<br>ಬಿನ್ ಲೇಟ್ ರಾಮಯ್ಯ, ದ್ವಾರಸಂದ್ರ, ಕಲ್ಲೂರ್ ಪೋಸ್ಟ್, ಶ್ರೀನಿವಾಸಪುರ,<br>ಕೋಲಾರ ಜಿಲ್ಲೆ. | ಕೋಲಾರ |
| 19. | ಡಾ: ಕೆ.ಜಿ. ಕುಲಕರ್ಣಿ,<br>ಸ್ಟೇಷನ್ ರೋಡ್, ಕೊಪ್ಪಳ. | ಕೊಪ್ಪಳ |
| 20. | ಡಾ: ಬಿ.ಎಂ. ನಾಗಪ್ಪ, ಎಂ.ಎ., ಪಿಹೆಚ್.ಡಿ<br>ಇಂಟಿಗ್ರೇಟೆಡ್ ರೂರಲ್ ಅಂಡ್ ಅರ್ಬನ್ ಡೆವಲಪ್‌ಮೆಂಟ್ ಇನ್ಸ್‌ಟ್ಯೂಟ್<br>ಆಫ್ ಅಡ್ಮಿನ್ ಆಫೀಸರ್, ಬಿ.ಡಿ.ಒ ಆಫೀಸ್ ಹತ್ತಿರ, ಮೈಸೂರು ರಸ್ತೆ,<br>ಮಳವಳ್ಳಿ, ಮಂಡ್ಯ | ಮಂಡ್ಯ |

| ಕ್ರಮ ಸಂಖ್ಯೆ | ಗೌರವ ವನ್ಯಜೀವಿ ಪರಿಪಾಲಕರ ಹೆಸರು ಮತ್ತು ವಿಳಾಸ | ನೇಮಕಾತಿ ಜಿಲ್ಲೆ |
|---|---|---|
| 21. | ಶ್ರೀ ಮುತ್ತಣ್ಣ,<br>36/6, ಕಾವೇರಿ ನಿಲಯ, ಕಿರಿಜಾಜಿ ರೋಡ್, ಜೆ.ಎಂ.ಎಸ್. ಕೋರ್ಟ್‌ನ ಹಿಂಭಾಗ, ಹುಣಸೂರು, ಮೈಸೂರು, ಜಿಲ್ಲೆ. | ಮೈಸೂರು |
| 22. | ಪ್ರೊ: ಎಸ್. ಶ್ರೀವತ್ಸ,<br>#ಎಲ್/200, ನಿಜಲಿಂಗಪ್ಪ ಕಾಲೋನಿ, ರಾಯಚೂರು. | ರಾಯಚೂರು |
| 23. | ಶ್ರೀ ರವಿ ಹನಿಯಾ,<br>ಗ್ರಾಮ ಭಾರತಿ, ಹನಿಯಾ ಪೋಸ್ಟ್ ತಾ: ಹೊಸನಗರ, ಶಿವಮೊಗ್ಗ ಜಿಲ್ಲೆ. | ಶಿವಮೊಗ್ಗ |
| 24. | ಶ್ರೀ ಚಂದುಬಾಬು,<br>ಮಂಜು ಏಜೆನ್ಸೀಸ್, 2ನೇ ಕ್ರಾಸ್, ಮಂಡಿಪೇಟೆ, ತುಮಕೂರು. | ತುಮಕೂರು |
| 25. | ಶ್ರೀ ಜಿ.ಎನ್. ಅಶೋಕವರ್ದನ್,<br>ಅತ್ರಿ ಪುಸ್ತಕ ಭಂಡಾರ, ಬಲ್‌ಮಠ, ಮಂಗಳೂರು | ಮಂಗಳೂರು |
| 26. | ಶ್ರೀ ಬಾಲಚಂದ್ರ ಹೆಗಡೆ ಎಲ್.<br>ವನ್ಯಜೀವಿ ಅಧ್ಯಯನಕಾರರು, ದೇವಿಮನೆ, ನೀಲಕುಂದ ಪೋಸ್ಟ್, ಹೆಗ್ಗರಣಿ ಮಾರ್ಗ, ಶಿರಸಿ, ಉತ್ತರ ಕನ್ನಡ–581 331. | ಉತ್ತರ ಕನ್ನಡ |

ಗೌರವ ವನ್ಯಜೀವಿ ಪರಿಪಾಲಕರ ಕರ್ತವ್ಯ ಮತ್ತು ಜವಾಬ್ದಾರಿಗಳು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಇರುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅಹ್ಮದ ಎ. ಮುಖ್ತದರ**

ಸರ್ಕಾರದ ಉಪ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 138 ಎಫ್ ಡಬ್ಲ್ಯೂಎಲ್ 2009, ದಿನಾಂಕ: 3.12.2009**

**DUTIES AND RESPONSIBILITY OF THE HONORARY WILDLIFE WARDENS:**

The main duty and responsibility of an Honorary Wildlife Warden is to assist whole heatedly the Chief Wildlife Warden for wildlife conservation and protection work especially with regard to the following matters:

i) Help and assist the Chief Wildlife Warden in Control of poaching and clandestine trade in wild animals and products/articles thereof.

ii) Help and assist the Chief Wildlife Warden in detection and prosecution of offences under the Wildlife (Protection) Act and the Rules made there under.

iii) Help and assist in preventing damage to the habitan of wildlife including fire protection.

iv) Carrying the message of conservation to the people and enlisting public support for nature and wildlife conservation The effort should be specially directed towards the communities living in or near the declared wildlife reserves.

v) Any other matter connected with the rotection of wildlife which may be entrusted by the Chief Wildlife Warden of the State, from time to time.

vi) Participate in carrying out wildlife consus etc., on the specific request / permission of the Chief Wildlife Warden.

**POWERS**

In accordance with sub-section (3) of section 4 of the Wildlife (Protection) Act, 1972, an Honorary Wildlife Warden appointed under sub-section (2) (c) of section 4 shall be subordinate to the Chief Wildlife Warden of the State and under section 59 of aforesaid Act, he shall be deemed to be a public servant within the meaning of section 21 of the Indian Penal Code. Protection for action taken in good faith is provided under section 60 of the Act.

**GENERAL**

(A) No. staff or vehicle support can be provided to Honorary Wardens as a matter of course. However, If the circumstances warrant, the departmental staff should provide all possible help and assistance.

(B) It is also appropriate that the actual expenses incurred by an Honorary Warden on travel by public transport for carrying out the duties assigned to him should be reimbursed by the State Government. In addition all actual expenses incurred in the detection of an offence under the Wildlife (Protection) Act, which leads to successful prosecution may be reimbursed after due verification.

(C) The State Government should recognize outstanding work or service rendered by any Honorary Warden. Such recognition can be by way of a letter of commendation, or a certificate signed by the Minister in charge of the Department, or the membership of the State Wildlife Advisory Board Cash grants could also be considered in suitable cases.

**ಅಹ್ಮದ್ ಎ. ಮುಖ್ತದರ್**

ಪಿ.ಆರ್. 2784 ಸರ್ಕಾರದ ಉಪ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ವಿಷಯ:** ಹೂ ಬಿಟ್ಟ ಮತ್ತು ಒಣಗಿದ ಬೊಂಬುಗಳನ್ನು ಮೈಸೂರು ಕಾಗದ ಕಾರ್ಖಾನೆ ನಿಯಮಿತ, ಭದ್ರಾವತಿ ಇವರಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು & ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಕಾಗದ ಕಾರ್ಖಾನೆ ನಿಯಮಿತ, ಬೆಂಗಳೂರು ಇವರ ಪತ್ರ ಸಂಖ್ಯೆ: MPM/CMD/202/2008 ದಿನಾಂಕ: 07–08–2008 ಮತ್ತು 22–12–2008.

2) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಎ೦7 (ಎ6) ಐಎನ್‌ಡಿ/ಎಂ–5/92–93, ದಿನಾಂಕ: 7–08–2009.

**ಪ್ರಸ್ತಾವನೆ:**

ಅಧ್ಯಕ್ಷರು & ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಕಾಗದ ಕಾರ್ಖಾನೆ ನಿಯಮಿತ, ಬೆಂಗಳೂರು ಇವರ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 7–08–2008 ಮತ್ತು 22–12–2008 ಪತ್ರಗಳಲ್ಲಿ ಸದರಿಯವರ ಕಾರ್ಖಾನೆಗೆ ಬಿದಿರನ್ನು 2004ನೇ ಸಾಲಿನಲ್ಲಿ ಸರಬರಾಜು ಮಾಡಿದ ಸೀನಿಯೋರೇಜ್ ದರದಲ್ಲಿಯೇ ಅಂದರೆ, ಪ್ರತಿ ಮೆಟ್ರಿಕ್ ಟನ್‌ಗೆ ರೂ. 150/–ರ ದರದಲ್ಲಿ ಒದಗಿಸುವಂತೆ ಕೋರಿರುತ್ತಾರೆ.

ಮೈಸೂರು ಕಾಗದ ಕಾರ್ಖಾನೆಗೆ ಹೂ ಬಿಟ್ಟ ಮತ್ತು ಒಣಗಿದ ಬೊಂಬುಗಳನ್ನು ಪ್ರತಿ ಮೆಟ್ರಿಕ್ ಟನ್‌ಗೆ ರೂ. 200/–ಗಳ ದರವನ್ನು ನಿಗದಿಪಡಿಸುವಂತೆ ಮತ್ತು ಸದರಿ ಕಾರ್ಖಾನೆಯು 50,000 ಮೆಟ್ರಿಕ್ ಟನ್ ಬಿದಿರನ್ನು ಫೆಬ್ರವರಿ 28ರೊಳಗಾಗಿ ಅಂದರೆ, ಬೇಸಿಗೆ ಪ್ರಾರಂಭವಾಗುವ ಮುನ್ನವೇ ಕತ್ತಾವಣೆ ಮಾಡಿ ಸಾಗಿಸಲು ಹಾಗೂ ಉಳಿದ 30,000 ಮೆಟ್ರಿಕ್ ಟನ್ ಬಿದಿರನ್ನು 2010ನೇ ಸಾಲಿನ ಮೇ ತಿಂಗಳೊಳಗಾಗಿ ಕಟಾವು ಮಾಡಿ ಸಾಗಸುವಂತೆ ಹಾಗೂ ಕೆನರಾ ಮತ್ತು ಬೆಳಗಾಂ ವೃತ್ತಗಳಲ್ಲಿ ಲಭ್ಯವಿರುವ ಬಿದಿರನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ದಿನಾಂಕ: 27–02–2009ರಂದು ಜರುಗಿದ ಸಭೆಯಲ್ಲಿ ನಿಗದಿಪಡಿಸಿರುವ ವೇಳಾಪಟ್ಟಿಯಂತೆ ಮರು ಟೆಂಡರ್ ಮೂಲಕ ವಿಲೇವಾರಿ ಮಾಡಲು ಸೂಚಿಸಲಾಗಿದೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆಯ (2)ರಲ್ಲಿ ಪತ್ರದಲ್ಲಿ ಓದಲಾದ ಹೂ ಬಿಟ್ಟ ಮತ್ತು ಒಣಗಿದ ಬೊಂಬುಗಳ ಟೆಂಡರ್‌ನ್ನು ದಿನಾಂಕ: 27–05–2009ರಂದು ಜರುಗಿಸಿದ್ದು, ಖರೀದಿದಾರರು ಪ್ರತಿ ಮೆಟ್ರಿಕ್ ಟನ್ನಿಗೆ ರೂ. 325/– ರಂತೆ ಬಿದಿರನ್ನು ತೆಗೆಯಲು ಒಪ್ಪಿರುವುದರಿಂದ ಈ ದರಗಳನ್ನು ಗಮನದಲ್ಲಿಟ್ಟುಕೊಂಡು ಮೈಸೂರು ಕಾಗದ ಕಾರ್ಖಾನೆಗೆ ಪ್ರತಿ ಮೇಟ್ರಿಕ್ ಟನ್ನಿಗೆ ಕನಿಷ್ಟ ರೂ. 300/– ದರ ನಿಗದಿಪಡಿಸುವಂತೆ ಕೋರಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 16 ಎಫ್‌ಡಿಪಿ 2008, ಬೆಂಗಳೂರು, ದಿನಾಂಕ: 3 ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಮೈಸೂರು ಕಾಗದ ಕಾರ್ಖಾನೆಗೆ ಹೂ ಬಿಟ್ಟ ಮತ್ತು ಒಣಗಿದ ಬಿದಿರನ್ನು ಪ್ರತಿ ಮೆಟ್ರಿಕ್ ಟನ್ನಿಗೆ ರೂ. 300/– ರ ಸೀನಿಯರೇಜ್ ದರದಲ್ಲಿ ಒದಗಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಪಿ.ಆರ್. 2785 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ. ಸುಬ್ಬಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಅಮಾನತ್ತಿನ ಅವಧಿಯನ್ನು ಇತ್ಯರ್ಥ ಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸೇಇವಿ 2009, ದಿನಾಂಕ: 11–06–2009.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸೇಇವಿ 2009, ದಿನಾಂಕ 23–09–2009

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ಸಮಾಜ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ರಾಜ್ಯದಲ್ಲಿನ ಹಿಂದುಳಿದ ವರ್ಗಗಳ ವರ್ಗೀಕರಣಕ್ಕೆ ಸಂಬಂಧಪಟ್ಟಂತೆ ಸಂಸ್ಥೆಯೊಂದಕ್ಕೆ ತಪ್ಪಾದ ಹಿಂಬರಹ ನೀಡಿ ಗೊಂದಲ ಉಂಟು ಮಾಡಿದ ಆರೋಪಕ್ಕಾಗಿ ಶ್ರೀ ಕೆ. ಸುಬ್ಬಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ 11–06–2009ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಡಲಾಯಿತು. ಆನಂತರ ಅಮಾನತ್ತನ್ನು ಪರಿಶೀಲಿಸಿ ಅವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ:23–09–2009ರ ಸರ್ಕಾರಿ ಆದೇಶದಲ್ಲಿ ಅವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳಲಾಯಿತು. ಇದರ ತರುವಾಯ ಪ್ರಕರಣವು ಪರಿಶೀಲಿಸಲ್ಪಟ್ಟ ಶಿಸ್ತು ಕ್ರಮ ಜರುಗಿಸಲು ಸೂಕ್ತವಲ್ಲದ ಪ್ರಕರಣವಾದ ಕಾರಣ ಅವರಿಗೆ ಒಂದು ಎಚ್ಚರಿಕೆ ನೀಡಿ ಪ್ರಕರಣವನ್ನು ಮುಕ್ತಾಯಗೊಳಿಸಲು ತೀರ್ಮಾನಿಸಲಾಯಿತು. ಅದರಂತೆ ಅವರ ಅಮಾನತ್ತಿನ ಅವಧಿಯನ್ನು ಇತ್ಯರ್ಥಪಡಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 12 ಸೇಇವಿ 2009 ಬೆಂಗಳೂರು, ದಿನಾಂಕ 4ನೇ ಡಿಸೆಂಬರ್ 2009**

ಶ್ರೀ ಕೆ. ಸುಬ್ಬಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ ಕರ್ನಾಟಕ ಸರ್ಕಾರದ ಸಚಿವಾಲಯ ಅವರು ದಿನಾಂಕ:11–6–2009 ಹಾಗೂ 23–09–2009ರ ಆದೇಶಗಳ ನಡುವೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದ ಮೇಲಿನ ಅವಧಿ ಎಂದು ಕೆ.ಸಿ.ಎಸ್.ಆರ್ಸ್. ನಿಯಮ 100(3)ರನ್ವಯ ಪರಿಗಣಿಸಲಾಗಿದೆ. ಈ ಅವಧಿಯಲ್ಲಿ ಶ್ರಿ ಕೆ.ಸುಬ್ಬಯ್ಯ ಅವರು ಅಮಾನತ್ತಿನಲ್ಲಿರದಿದ್ದಲ್ಲಿ ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ. ಇನ್ನು ಮುಂದೆ ಇಂತಹ ಪ್ರಮಾದಗಳಿಗೆ ಆಸ್ಪದ ನೀಡಕೂಡದೆಂದು ಶ್ರೀ ಕೆ. ಸುಬ್ಬಯ್ಯ ಅವರಿಗೆ ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 2786 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ತಿದ್ದೋಲೆ ಸಂಖ್ಯೆ: ಕಸಂವಾಪ್ರ 13 ರಾಪಸ 09, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2009**

ದಿನಾಂಕ:13.11.2009ರ ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 13 ರಾಪಸ 2009ರ ಆದೇಶ ಭಾಗದ ಪ್ಯಾರಾ–2ರ ಮೊದಲನೇ ಸಾಲಿನಲ್ಲಿ **"2008–09ನೇ ಸಾಲಿನ ಲೆಕ್ಕ ಶೀರ್ಷಿಕೆ"** ಎಂಬುದಕ್ಕೆ ಬದಲಾಗಿ **"2009–10ನೇ ಸಾಲಿನ ಲೆಕ್ಕ ಶಿರ್ಷಿಕೆ"** ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2697 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್.ವೈ.ಹೊಸಮನಿ, ನಿವೃತ್ತ ಕೆ.ಎ.ಎಸ್, (ಕಿರಿಯ ಶ್ರೇಣಿ) ಅಧಿಕಾರಿ ಇವರಿಗೆ ಪೂರ್ವಾನ್ವಯವಾಗಿ ಕೆ.ಎ.ಎಸ್ (ಹಿರಿಯ ಶ್ರೇಣಿ ವೃಂದಕ್ಕೆ ಬಡ್ತಿ ನೀಡುವ ಬಗ್ಗೆ ಆದೇಶ)

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 78 ಎಸ್‌ಇಎನ್ 96 ದಿನಾಂಕ: 2–11–2001
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 78 ಎಸ್‌ಐಎನ್ 96 ದಿನಾಂಕ: 1–7–2002.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33ಕೆಇವಿ 2007 ದಿನಾಂಕ:15–11–07
4) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 60 ಅಸೇವ 2002(1) ದಿನಾಂಕ: 13–11–2003.
5) ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 118 ಅಸೇವ 09 ದಿನಾಂಕ: 19–09–09
6) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ:PSC/125/CNS 09 ದಿನಾಂಕ: 15–10–09

**ಪ್ರಸ್ತಾವನೆ:**

ಶ್ರೀ ಎಸ್.ವೈ.ಹೊಸಮನಿ, ಕೆ.ಎ.ಎಸ್. ಕಿರಿಯ ಶ್ರೇಣಿ ಅಧಿಕಾರಿ ಇವರು ದಿನಾಂಕ: 31–03–2006 (ಜನ್ಮ ದಿನಾಂಕ:01–04–1948) ರಂದು ವಯೋಮಿತಿ ಮೇರೆಗೆ ಸೇವೆಯಿಂದ ನಿವೃತ್ತಿ ಹೊಂದಿರುತ್ತಾರೆ. ಸದರಿಯವರಿಗೆ ತಹಶೀಲ್ದಾರ್ ವೃಂದದಿಂದ ಕೆ.ಎ.ಎಸ್ ಕಿರಿಯ ಶ್ರೇಣಿ ವೃಂದಕ್ಕೆ ದಿನಾಂಕ: 28–07–1987ರಂದು ಬಡ್ತಿ ನೀಡಲಾಗಿದೆ. ಕೆ.ಎ.ಎಸ್ ಕಿರಿಯ ಶ್ರೇಣಿ ವೃಂದದಲ್ಲಿ ಇವರ ಜೇಷ್ಠತಾ ಕ್ರಮ ಸಂಖ್ಯೆಯು 546 ಆಗಿರುತ್ತದೆ. ಕೆ.ಎ.ಎಸ್ ಕಿರಿಯ ಶ್ರೇಣಿ ವೃಂದದಿಂದ ಕೆಎಎಸ್ ಹಿರಿಯ ಶ್ರೇಣಿ ವೃಂದಕ್ಕೆ ಬಡ್ತಿ ನೀಡಲು ದಿನಾಂಕ:3–8–98ರಂದು ಇಲಾಖಾ ಮುಂಬಡ್ತಿ ಸಮಿತಿ ಸಭೆಯು ನಡೆದಿದ್ದು, ಶ್ರೀ ಎಸ್.ವೈ.ಹೊಸಮನಿ ಪ್ರಕರಣದಲ್ಲಿ 1995–96ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾ ದಾಖಲಾಗಿದ್ದುದರಿಂದ ಹಾಗೂ 1996–97ರ ಸಾಲಿನಲ್ಲಿ ಅಮಾನತ್ತಿನಲ್ಲಿದ್ದುದರಿಂದ ಕಾರ್ಯ ನಿರ್ವಹಣಾ ವರದಿಯು ಲಭ್ಯವಿಲ್ಲದಿರುವುದರಿಂದ ಅವರ ಪ್ರಕರಣವನ್ನು ಪರಿಶೀಲಿಸಿ ಅವರ ಮೌಲ್ಯಮಾಪನವನ್ನು ಮೊಹರು ಲಕೋಟೆಯಲ್ಲಿ ಇಡಲಾಗಿತ್ತು. ತದನಂತರ ಹಿರಿಯ ಶ್ರೇಣಿ ವೃಂದಕ್ಕೆ ಬಡ್ತಿ ನೀಡಲು ದಿನಾಂಕ: 13–07–1999ರಂದು ಇಲಾಖಾ ಮುಂಬಡ್ತಿ ಸಮಿತಿ ಸಭೆ ನಡೆದಿದ್ದು, ಸದರಿಯವರ 1997–98ನೇ ಸಾಲಿನ ಕಾರ್ಯ ನಿರ್ವಹಣಾ ವರದಿಯು ಲಭ್ಯವಿಲ್ಲದಿರುವುದರಿಂದ ಹಾಗು ಅಧಿಕಾರಿಯು ದಿನಾಂಕ: 11–10–96ರಿಂದ 12–03–98 ರವರೆಗೆ ಅಮಾನತ್ತಿನಲ್ಲಿರುವುದನ್ನು ಹಾಗೂ ಅಧಿಕಾರಿಯ ವಿರುದ್ಧ ದಿನಾಂಕ: 17–05–99ರಂದು ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದರಿಂದ ಇಲಾಖಾ ಮುಂಬಡ್ತಿ ಸಭೆಯಲ್ಲಿ ಅಧಿಕಾರಿಯವರ ಮೌಲ್ಯಮಾಪನವನ್ನು ಮೊಹರು ಲಕೋಟೆಯಲ್ಲಿಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ 2–11–2001ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇದ್ದ ಇಲಾಖಾ ವಿಚಾರಣೆಯಲ್ಲಿ ಆರೋಪವು ಸಾಬೀತಾಗಿದ್ದರಿಂದ ಅವರಿಗೆ ವಾಗ್ದಂಡನೆಯನ್ನು ವಿಧಿಸಲಾಗಿತ್ತು. ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 1–7–02ರ ಆದೇಶದಲ್ಲಿ ಅವರು ಅಮಾನತ್ತಿನಲ್ಲಿ ಕಳೆದ ದಿನಾಂಕ 11–10–96ರಿಂದ 12–03–98 ರವರೆಗಿನ ಅವಧಿಯನ್ನು ಕರ್ತವ್ಯದ ಮೇಲೆ ಕಳೆಯದ ಅವಧಿಯೆಂದು (Period not spent on duty) ಆದೇಶಿಸಲಾಗಿತ್ತು.

ಕೆ.ಎ.ಎಸ್ ಕಿರಿಯ ಶ್ರೇಣಿ ವೃಂದದಿಂದ ಕೆ.ಎ.ಎಸ್ ಹಿರಿಯ ಶ್ರೇಣಿ ವೃಂದಕ್ಕೆ ಮುಂಬಡ್ತಿ ನೀಡಲು ದಿನಾಂಕ 27–08–03 ಮತ್ತು ದಿನಾಂಕ: 17–05–05 ರಂದು ಇಲಾಖಾ ಮುಂಬಡ್ತಿ ಸಭೆಯು ನಡೆದಿದ್ದು, ಆ ಸಂದರ್ಭದಲ್ಲಿ ಸದರಿಯವರ ವಿರುದ್ಧ ಲಂಚ ಸ್ವೀಕೃತ ಆಪಾದನೆ ಮೇರೆಗೆ ಕರ್ನಾಟಕ ಲೋಕಾಯುಕ್ತ ಅಧಿಕಾರಿಗಳು ದಾವಣಗೆರೆಯ ವಿಶೇಷ ನ್ಯಾಯಲಯದಲ್ಲಿ ಪ್ರಕರಣ ಸಂಖ್ಯೆ: 2/2003ನ್ನು ದಾಖಲಿಸಿ, ಕ್ರಿಮಿನಲ್ ಪ್ರಕರಣ ನಡೆಯುತ್ತಿದ್ದುದರಿಂದ ಅವರ ಬಡ್ತಿಯ ಅರ್ಹತೆಯನ್ನು ಮೊಹರು ಲಕೋಟೆಯಲ್ಲಿ ಇಡಲಾಗಿತ್ತು. ಮೇಲೆ ಓದಲಾದ ಕ್ರಮಾಂಕ (3)ರ ದಿನಾಂಕ: 15–11–07ರ ದಿನಾಂಕ 15–11–07ರ ಸರ್ಕಾರದ ಆದೇಶದಲ್ಲಿ ಲೋಕಾಯುಕ್ತ ಪ್ರಕರಣದಲ್ಲಿ ಅವರನ್ನು ದೋಷಾರೋಪಣೆಯಿಂದ ಮುಕ್ತರನ್ನಾಗಿಸಿದೆ. ಹಾಗೂ ಸದರಿ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯತರು ಯಾವ ಸೌಲಭ್ಯವನ್ನು ಪಡೆಯಲು ಅರ್ಹರಿದ್ದರೋ ಅವುಗಳನ್ನು ಪಡೆಯಲು ಅರ್ಹರಾಗಿರುತ್ತಾರೆಂದು ಆದೇಶಿಸಲಾಗಿತ್ತು. ಸದರಿಯವರ ಮೇಲಿದ್ದ ಇಲಾಖಾ ವಿಚಾರಣೆಯಲ್ಲಿ ಸರ್ಕಾರಿ ಆದೇಶ ದಿನಾಂಕ: 2–11–01ರಲ್ಲಿ ವಾಗ್ದಂಡನೆ ವಿಧಿಸಿರುವುದನ್ನು ಪರಿಗಣಿಸಿ ಹಾಗೂ ತದನಂತರ ದಿನಾಂಕ: 15–11–07ರ ಸರ್ಕಾರಿ ಆದೇಶದಲ್ಲಿ ಲೋಕಾಯುಕ್ತ ಪ್ರಕರಣದಿಂದ ದೋಷಮುಕ್ತರನ್ನಾಗಿಸಿರುವುದನ್ನು ಗಣನೆಗೆ ತೆಗೆದುಕೊಂಡು ಸದರಿ ನಿವೃತ್ತ ಅಧಿಕಾರಿಯು ದಿನಾಂಕ: 27–08–03ರಂದು ನಡೆದ ಇಲಾಖಾ ಮುಂಬಡ್ತಿ ಸಭೆಯಲ್ಲಿ ಬಡ್ತಿಗೆ ಅರ್ಹರಿದ್ದರು ಎಂದು ಪರಿಗಣಿಸಿ, ಸದರಿ ಇಲಾಖಾ ಮುಂಬಡ್ತಿ ಸಭೆಯ ತೀರ್ಮಾನದಂತೆ ಮೇಲೆ ಓದಲಾದ ಕ್ರಮಾಂಕ (4)ರ ಸರ್ಕಾರಿ ಅಧಿಸೂಚನೆಯಲ್ಲಿ ಬಡ್ತಿ ನೀಡಿದ ಅಧಿಕಾರಿಗಳಲ್ಲಿ ಜೇಷ್ಠತೆಯಲ್ಲಿ ಕಿರಿಯರಾಗಿದ್ದ ಶ್ರೀ ಬಿ.ಸುರೇಂದ್ರನಾಥ್ ಇವರಿಗೆ ಹಿರಿಯ

ಶ್ರೇಣಿ ವೃಂದಕ್ಕೆ ಬಡ್ತಿ ನೀಡಿದ ದಿನಾಂಕದಿಂದ ಜಾರಿಗೆ ಬರುವಂತೆ ಪೂರ್ವಾನ್ವಯವಾಗಿ ಶ್ರೀ ಎಸ್.ವೈ.ಹೊಸಮನಿ ಇವರಿಗೆ ಬಡ್ತಿ ನೀಡಲು ಸರ್ಕಾರವು ಉದ್ದೇಶಿಸಿದ್ದ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗವು ಮೇಲೆ ಓದಲಾದ ಕ್ರಮಾಂಕ (6) ರ ದಿನಾಂಕ: 15–10–09 ರಂದು ತನ್ನ ಸಹಮತಿ ನೀಡಿರುತ್ತದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 118 ಅಸೇವ 2009, ಬೆಂಗಳೂರು ದಿನಾಂಕ: 1ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ವೈ.ಹೊಸಮನಿ, ನಿವೃತ್ತ ಕೆ.ಎ.ಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರಿಗೆ ಅವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾಗಿದ್ದ ಶ್ರೀ ಬಿ.ಸುರೇಂದ್ರನಾಥ್ ಇವರಿಗೆ ಕೆಎಎಸ್ (ಹಿರಿಯ ಶ್ರೇಣಿ) ವೃಂದಕ್ಕೆ ಬಡ್ತಿ ನೀಡಿದ ದಿನಾಂಕ 13–11–03ರಿಂದಲೇ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವೆಗಳು (ಆರ್.ಪಿ.ಪಿ.ಪಿ) ನಿಯಮಗಳು 1978ರ ನಿಯಮ 2(1)(ಎ) ರನ್ವಯ ಪೂರ್ವಾನ್ವಯವಾಗಿ ಕೆ.ಎ.ಎಸ್ ಹಿರಿಯ ಶ್ರೇಣಿ ವೃಂದಕ್ಕೆ ಬಡ್ತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 2787 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ಆದೇಶ ಸಂಖ್ಯೆ: ಪಸಂಮೀ 290 ಪಸಸೇ 2009, ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2009**

**ವಿಷಯ:** ಡಾ: ಮಲ್ಲಿಕಾರ್ಜುನ ಹೆಚ್.ಪಾಟೀಲ್, ಪಶುವೈದ್ಯಾಧಿಕಾರಿ ಇವರನ್ನು ಸರ್ಕಾರಿ ಸೇವೆಯಿಂದ ತೆಗೆದು ಹಾಕುವ (Discharge) ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ–2/ವಿವ–288/2008–09, ದಿನಾಂಕ:14.05.2009 ಹಾಗೂ 13.10.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಸಂಚಾರಿ ಪಶುಚಿಕಿತ್ಸಾಲಯ, ಸೊರಬ, ಶಿವಮೊಗ್ಗ ಜಿಲ್ಲೆ ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾ: ಮಲ್ಲಿಕಾರ್ಜುನ. ಹೆಚ್.ಪಾಟೀಲ್, ಪಶುವೈದ್ಯಾಧಿಕಾರಿ ಇವರು ದಿನಾಂಕ: 15–05–2006ರಂದು ಕರ್ತವ್ಯಕ್ಕೆ ಹಾಜರಾಗಿದ್ದು, ದಿನಾಂಕ:15–05–2006 ರಿಂದ ದಿನಾಂಕ 31–08–2007 ರವರೆಗೆ ಕರ್ತವ್ಯ ನಿರ್ವಹಿಸಿ ದಿನಾಂಕ 01–09–2007ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಈ ಬಗ್ಗೆ ಶಿವಮೊಗ್ಗ ಜಿಲ್ಲಾ ಉಪನಿರ್ದೇಶಕರು ತಕ್ಷಣ ಕರ್ತವ್ಯದ ಮೇಲೆ ಹಾಜರಾಗಲು ನೋಟಿಸ್ ಜಾರಿ ಮಾಡಿದ ನಂತರ ಡಾ: ಮಲ್ಲಿಕಾರ್ಜುನ ಹೆಚ್. ಪಾಟೀಲ್, ಇವರು ವೈಯಕ್ತಿಕ ಕಾರಣದಿಂದಾಗಿ ಹುದ್ದೆಯಲ್ಲಿ ಮುಂದುವರೆಯಲಾಗದ ಕಾರಣ ಸ್ವ–ಇಚ್ಛೆಯಿಂದ ಪಶುವೈದ್ಯಾಧಿಕಾರಿ ಹುದ್ದೆಗೆ ರಾಜೀನಾಮೆ ನೀಡಿದ್ದು, ರಾಜೀನಾಮೆಯನ್ನು ಅಂಗೀಕರಿಸಿ ಸೇವೆಯಿಂದ ಬಿಡುಗಡೆ ಮಾಡುವಂತೆ ಕೋರಿರುತ್ತಾರೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿ ವೈಯಕ್ತಿಕ ಕಾರಣ ನೀಡಿ ರಾಜೀನಾಮೆ ಸಲ್ಲಿಸಿದ್ದು ಅವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಯಾವುದೂ ಇಲ್ಲವಾದ್ದರಿಂದ ಹಾಗೂ ಅಧಿಕಾರಿಯ ಖಾಯಂ ಪೂರ್ವ ಸೇವಾವಧಿ ಘೋಷಣೆಯಾಗದಿರುವುದರಿಂದ ಅವರನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು, 1977ರ ನಿಯಮ 6(1)ರಡಿ ಸೇವೆಯಿಂದ ತೆಗೆದು ಹಾಕಲು ಆದೇಶ ನೀಡಬೇಕಾಗಿ ಕೋರಿರುತ್ತಾರೆ.

2. ಡಾ: ಮಲ್ಲಿಕಾರ್ಜುನ ಹೆಚ್.ಪಾಟೀಲ್, ಪಶುವೈದ್ಯಾಧಿಕಾರಿ ಇವರು ಮೇಲಾಧಿಕಾರಿಗಳಿಂದ ರಜೆ ಮಂಜೂರಾತಿ ಮಾಡಿಸಿಕೊಳ್ಳದೇ ಹಾಗೂ ಕರ್ತವ್ಯಕ್ಕೆ ಹಾಜರಾಗದ ಬಗ್ಗೆ ಮೇಲಾಧಿಕಾರಿಗಳಿಗೆ ಪೂರ್ವಭಾವಿಯಾಗಿ ಮಾಹಿತಿ ನೀಡದೇ ಪರೀಕ್ಷಾರ್ಥ ಅವಧಿಯಲ್ಲಿ ಅನಧಿಕೃತ ಗೈರುಹಾಜರಾಗಿ ಕರ್ತವ್ಯ ಲೋಪವೆಸಗಿ ದುರ್ವರ್ತನೆ ತೋರಿರುವುದರ ಜೊತೆಗೆ ಕಚೇರಿಯ ದೈನಂದಿನ ಕಾರ್ಯಚಟುವಟಿಕೆಗಳಿಗೆ ತೊಂದರೆ ಉಂಟು ಮಾಡಿರುತ್ತಾರೆ. ತದನಂತರ ಪಶುವೈದ್ಯಾಧಿಕಾರಿ ಹುದ್ದೆಗೆ ರಾಜೀನಾಮೆ ಸಲ್ಲಿಸಿ ಅದು ಅಂಗೀಕಾರವಾಗುವವರೆಗೂ ಹುದ್ದೆಯಲ್ಲಿ ಮುಂದುವರೆಯದೇ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆ. ಇದರಿಂದಾಗಿ ಸದರಿ ಅಧಿಕಾರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಇಷ್ಟವಿಲ್ಲವೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರ ಡಾ: ಮಲ್ಲಿಕಾರ್ಜುನ ಹೆಚ್.ಪಾಟೀಲ್, ಪಶುವೈದ್ಯಾಧಿಕಾರಿ ಇವರ ರಾಜೀನಾಮೆ ಅಂಗೀಕರಿಸುವ ಬದಲು ಆಯುಕ್ತರ ಶಿಫಾರಸ್ಸಿನಂತೆ ಸದರಿ ಅಧಿಕಾರಿಯನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು, 1977ರ ನಿಯಮ 6(1)ರನ್ವಯ ಸರ್ಕಾರಿ ಸೇವೆಯಿಂದ ತೆಗೆದು ಹಾಕಲು (Discharge) ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

3. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ.ಮಲ್ಲಿಕಾರ್ಜುನ ಹೆಚ್.ಪಾಟೀಲ್, ಪಶುವೈದ್ಯಾಧಿಕಾರಿ, ಸಂಚಾರಿ ಪಶುಚಿಕಿತ್ಸಾಲಯ, ಸೊರಬ, ಶಿವಮೊಗ್ಗ ಜಿಲ್ಲೆ ಇವರು ಪರೀಕ್ಷಾರ್ಥ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿ ದುರ್ವರ್ತನೆ ತೋರಿ ಕರ್ತವ್ಯ ಲೋಪ ಎಸಗಿರುವುದು ದೃಢಪಟ್ಟಿರುವುದರಿಂದ, ಸದರಿ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು, 1977ರ ನಿಯಮ 6(1)ರನ್ವಯ ಸರ್ಕಾರಿ ಸೇವೆಯಿಂದ ತೆಗೆದು ಹಾಕಿ (Discharge) ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, (ಪಶುಸಂಗೋಪನೆ–ಎ)

ಪಿ.ಆರ್. 2788

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸೂರ್ಯ ಕಾಲೇಜ್ ಆಫ್ ನರ್ಸಿಂಗ್ ಮತ್ತು ಸೂರ್ಯ ಸ್ಕೂಲ್ ಆಫ್ ನರ್ಸಿಂಗ್, ಬೆಂಗಳೂರು ಇದರ ಮಾಲೀಕತ್ವ ಮತ್ತು ವಿಳಾಸ ಬದಲಾವಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆಕುಕ 49 ಎಂಪಿಎಸ್ 2005, ದಿನಾಂಕ 09.06.2005

2. ಸರ್ಕಾರದ ಆದೇಶ ಸಂಖ್ಯೆ: ಆಕುಕ 41 ಎಂಎಂಇ 2005, ದಿನಾಂಕ 29.10.2005

3. ಶ್ರೀ ಬಾಲಾಜಿ ಎಜುಕೇಷನ್ ಟ್ರಸ್ಟ್ (ರಿ)ನ ದಿನಾಂಕ: 09.09.2009ರ ಪತ್ರ.

4. ಪತ್ರ ಸಂಖ್ಯೆ: ವೈಶಿನಿ/ಎಂಇಎಸ್(2) 51/2009–10, ದಿನಾಂಕ 15.10.2009

**ಪ್ರಸ್ತಾವನೆ:**

ಸೂರ್ಯ ಕಾಲೇಜ್ ಆಫ್ ನರ್ಸಿಂಗ್ ಬೆಂಗಳೂರು ಇದಕ್ಕೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2005–06ನೇ ಸಾಲಿನಿಂದ ಜಾರಿಗೆ ಬರುವಂತೆ 40(ನಲವತ್ತು) ವಿದ್ಯಾರ್ಥಿಗಳ ಪ್ರವೇಶ ಮಿತಿಯೊಂದಿಗೆ ಬಿ.ಎಸ್.ಸಿ. ನರ್ಸಿಂಗ್ ಕೋರ್ಸನ್ನು ಪ್ರಾರಂಭಿಸಲು ಕೆಲವು ಷರತ್ತುಗಳನ್ವಯ ಸಂಯೋಜನೆ ನೀಡಲು ಶಿಫಾರಸ್ಸು ಮಾಡಲಾಗಿತ್ತು.

ಸೂರ್ಯ ಸ್ಕೂಲ್ ಆಫ್ ನರ್ಸಿಂಗ್, ಬೆಂಗಳೂರು ಇದಕ್ಕೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2005–06ನೇ ಸಾಲಿನಿಂದ 40 ಸೀಟುಗಳಿಂದ ಪ್ರವೇಶ ಮಿತಿಯೊಂದಿಗೆ ಡಿಪ್ಲೋಮಾ ಇನ್ ನರ್ಸಿಂಗ್ ಕೋರ್ಸಿಗೆ ಮಾನ್ಯತೆ ಮತ್ತು ಅನುಮೋದನೆಯನ್ನು ನೀಡಲಾಗಿತ್ತು.

ಶ್ರೀ ಬಾಲಾಜಿ ಎಜುಕೇಷನ್ ಟ್ರಸ್ಟ್ (ರಿ) ಬೆಂಗಳೂರು ಇವರು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸೂರ್ಯ ಕಾಲೇಜ್ ಆಫ್ ನರ್ಸಿಂಗ್ ಮತ್ತು ಸೂರ್ಯ ಸ್ಕೂಲ್ ಆಫ್ ನರ್ಸಿಂಗ್ ನಂ.624, ಸೃಷ್ಟಿ, 4ನೇ ಬಿ ಮೈನ್, 6ನೇ ಕ್ರಾಸ್, ಒ.ಎಂ.ಬಿ.ಆರ್.ಲೇಔಟ್, ಭುವನಗಿರಿ, ಬೆಂಗಳೂರು–13 ಇದರ ಮಾಲೀಕತ್ವವನ್ನು ಶ್ರೀ ಬಾಲಾಜಿ ಎಜುಕೇಷನ್ ಟ್ರಸ್ಟ್ (ರಿ), ಇದಕ್ಕೆ ಬದಲಾಯಿಸಲು ಹಾಗೂ ವಿಳಾಸವನ್ನು ನಂ.96, ಬೊಮ್ಮನಹಳ್ಳಿ, ಮಂಡೂರು ಪೋಸ್ಟ್, ಬಿದರಹಳ್ಳಿ, ಹೋಬಳಿ, ಬೆಂಗಳೂರು–49ಕ್ಕೆ ಬದಲಾಯಿಸಿ ಸ್ಥಳಾಂತರಿಸಲು ಸರ್ಕಾರದ ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿದ್ದರು.

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ (4)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸೂರ್ಯ ಕಾಲೇಜ್ ಆಫ್ ನರ್ಸಿಂಗ್ ಮತ್ತು ಸೂರ್ಯ ಸ್ಕೂಲ್ ಆಫ್ ನರ್ಸಿಂಗ್, ಬೆಂಗಳೂರು ಇದನ್ನು ಶ್ರೀ ಬಾಲಾಜಿ ಎಜುಕೇಷನ್ ಟ್ರಸ್ಟ್ (ರಿ)ನ ಬಾಲಾಜಿ ಶಿಕ್ಷಣ ಸಂಸ್ಥೆ ನಂ.96, ಬೊಮ್ಮನಹಳ್ಳಿ, ಮಂಡೂರು ಪೋಸ್ಟ್, ಬಿದರಹಳ್ಳಿ, ಹೋಬಳಿ, ಬೆಂಗಳೂರು –49 ವಿಳಾಸಕ್ಕೆ ವರ್ಗಾಯಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಸೂರ್ಯ ಕಾಲೇಜ್ ಆಫ್ ನರ್ಸಿಂಗ್ ಮತ್ತು ಸೂರ್ಯ ಸ್ಕೂಲ್ ಆಫ್ ನರ್ಸಿಂಗ್, ಬೆಂಗಳೂರು ಇದನ್ನು ಶ್ರೀ ಬಾಲಾಜಿ ಎಜುಕೇಷನ್ ಟ್ರಸ್ಟ್ (ರಿ) ಇದರ ಬಾಲಾಜಿ ಶಿಕ್ಷಣ ಸಂಸ್ಥೆ ನಂ.96, ಬೊಮ್ಮನಹಳ್ಳಿ, ಮಂಡೂರು ಪೋಸ್ಟ್, ಬಿದರಹಳ್ಳಿ ಹೋಬಳಿ, ಬೆಂಗಳೂರು–49 ಇದಕ್ಕೆ ಮಾಲೀಕತ್ವ ಮತ್ತು ವಿಳಾಸವನ್ನು ಬದಲಾಯಿಸಲು ಅನುಮತಿ ನೀಡಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 238 ಎಂಪಿಎಸ್ 2009, ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2009**

ಸೂರ್ಯ ಕಾಲೇಜ್ ಆಫ್ ನರ್ಸಿಂಗ್ ಮತ್ತು ಸೂರ್ಯ ಸ್ಕೂಲ್ ಆಫ್ ನರ್ಸಿಂಗ್, ಬೆಂಗಳೂರು ಇವುಗಳನ್ನು ಶ್ರೀ ಬಾಲಾಜಿ ಎಜುಕೇಷನ್ ಟ್ರಸ್ಟ್ (ರಿ) ಇದರ ಬಾಲಾಜಿ ಶಿಕ್ಷಣ ಸಂಸ್ಥೆ, ನಂ.96, ಬೊಮ್ಮನಹಳ್ಳಿ, ಮಂಡೂರು ಪೋಸ್ಟ್, ಬಿದರಹಳ್ಳಿ, ಹೋಬಳಿ, ಬೆಂಗಳೂರು–49 ಇದಕ್ಕೆ ಮಾಲಿಕತ್ವ ಮತ್ತು ವಿಳಾಸವನ್ನು ಬದಲಾಯಿಸಲು ಅನುಮತಿಯನ್ನು ನೀಡಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ: ಆಕುಕ 49 ಎಂಪಿಎಸ್ 2005, ದಿನಾಂಕ 09.06.2005 ಮತ್ತು ಸರ್ಕಾರದ ಆದೇಶ ಸಂಖ್ಯೆ: ಆಕುಕ 41 ಎಂಎಂಇ 2005, ದಿನಾಂಕ 29.10.2005ರ ಇತರೆ ಎಲ್ಲಾ ಷರತ್ತುಗಳು ಯಥಾವತ್ತಾಗಿ ಅನ್ವಯಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪಿ.ಆರ್. 2789

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಬೆಂಗಳೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಉಪನಿರ್ದೇಶಕರ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 90 ಕೆಎಂಯು 2003 ದಿನಾಂಕ 5–9–2003.
2. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 11 ಕೆಎಂಯು 2007 ದಿನಾಂಕ 26–7–2007 ಮತ್ತು 11–12–2007
3. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 215 ಕೆಎಂಯು 2008 ದಿನಾಂಕ 16–12–2008
4 ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ಪತ್ರ ಸಂಖ್ಯೆ: ಸಂ:ಡಿಎಎಂ:ಇಎಸ್‌ಟಿ:1:ಕ:ಸಂಖ್ಯೆ:350:2009–10:107 ದಿನಾಂಕ 17–08–2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 5–9–2003ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ, ಬೆಂಗಳೂರಿನಲ್ಲಿರುವ ಸಹಾಯಕ ನಿರ್ದೇಶಕರ (ವಸ್ತು ಸಂಗ್ರಹಾಲಯಗಳ ಅಭಿವೃದ್ಧಿ) ಹುದ್ದೆಯನ್ನು ಒಂದು ವರ್ಷದ ಅವಧಿಗೆ ಉಪನಿರ್ದೇಶಕರ ಹುದ್ದೆಗೆ ಉನ್ನತೀಕರಿಸಲಾಯಿತು. ಸದರೀ ಹುದ್ದೆಯು ಕಾಲಕಾಲಕ್ಕೆ ಮುಂದುವರಿಸಲ್ಪಟ್ಟು ಮೇಲೆ (2)ರಲ್ಲಿ ಓದಲಾದ ದಿನಾಂಕ: 26–7–2007ರ ಸರ್ಕಾರಿ ಆದೇಶದಲ್ಲಿ 5–9–2006ರಿಂದ ಒಂದು ವರ್ಷದವರೆಗೆ ಹಾಗೂ ದಿನಾಂಕ 11.12.2007ರ ಆದೇಶದಲ್ಲಿ ಮತ್ತೊಂದು ವರ್ಷದವರೆಗೆ ಮುಂದುವರಿಸಿ ಆದೇಶಿಸಲಾಗಿದೆ. ಉಲ್ಲೇಖ (3)ರಲ್ಲಿ ಓದಲಾದ ದಿನಾಂಕ: 16–12–2008ರ ಆದೇಶದಲ್ಲಿ ಉಪನಿರ್ದೇಶಕರ ಹುದ್ದೆಯನ್ನು ದಿನಾಂಕ:05–09–2008 ರಿಂದ 05–09–2009ರವರೆಗೆ ಮತ್ತೊಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಲಾಗಿದೆ. ಉಲ್ಲೇಖ (4)ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಬೆಂಗಳೂರಿನಲ್ಲಿರುವ ಉಪನಿರ್ದೇಶಕರ ಹುದ್ದೆಯು ಅತ್ಯಂತ ಪ್ರಮುಖ ಹಾಗೂ ಅತ್ಯಾವಶ್ಯಕವಾಗಿರುವುದರಿಂದ ಸದರಿ ಹುದ್ದೆಯನ್ನು ದಿನಾಂಕ 5–09–2009ರಿಂದ 04–09–2010ರವರೆಗೆ ಮುಂದುವರಿಸಲು ಪ್ರಸ್ತಾಪಿಸಿರುವರು. ಸದರಿ ಹುದ್ದೆಯನ್ನು ಮುಂದುವರಿಸಲು ವಿಷಯವನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 203 ಕೆಎಂಯು 2009, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2009**

ಬೆಂಗಳೂರಿನಲ್ಲಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಉಪನಿರ್ದೇಶಕರ ಹುದ್ದೆಯನ್ನು ದಿನಾಂಕ:5–09–2009ರಿಂದ 4–09–2010ರವರೆಗೆ ಒಂದು ವರ್ಷದ ಅವಧಿಗೆ ಸರ್ಕಾರವು ಈ ಮೂಲಕ ಮುಂದುವರಿಸಿ ಆದೇಶಿಸಿದೆ. ಈ ಹುದ್ದೆಗೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ನಿಯಮಾನುಸಾರ ಲಭ್ಯವಿರುವ ವೇತನ ಭತ್ಯೆ ಇತ್ಯಾದಿಗಳು ಅನ್ವಯಿಸುತ್ತವೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಇವರು ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 1466 ಎಎಫ್‌ಎಸ್ 2009 ದಿನಾಂಕ 09–11–2009ರಲ್ಲಿ ನೀಡಿದ ಸಹಮತಿ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–1996ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಆದೇಶದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2790

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, (ಆಡಳಿತ ಕನ್ನಡ)

**ಕಂದಾಯ ಸಚಿವಾಲಯ**

**ವಿಷಯ:** 2009–10ನೇ ಸಾಲಿನಲ್ಲಿ ಭಾರಿ ಮಳೆಯಿಂದ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಗುಲ್ಬರ್ಗಾ ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ದಿನಾಂಕ: 21–11–2009

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಬಿದ್ದ ಬಾರಿ ಮಳೆಯಿಂದ ಉಂಟಾಗಿ ಗುಲ್ಬರ್ಗಾ ಜಿಲ್ಲೆಯಲ್ಲಿ ಬೆಳೆ ಹಾನಿ ಉಂಟಾಗಿರುವುದಕ್ಕೆ ತುರ್ತು ಪರಿಹಾರ ಕಾರ್ಯಕೈಗೊಳ್ಳಲು ಮೇಲೆ ಓದಲಾದ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲಾಧಿಕಾರಿಗಳು, ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್ಆರ್ 2009 ಬೆಂಗಳೂರು, ದಿನಾಂಕ: 21ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಳೆಯಿಂದ ಆಗಿರುವ ಬೆಳೆ ಹಾನಿಗೆ ತುರ್ತು ಪರಿಹಾರ ಕಾರ್ಯಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಗುಲ್ಬರ್ಗಾ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ರೂ.500.00ಲಕ್ಷ (ರೂ.ಐದುನೂರು ಲಕ್ಷಗಳು ಮಾತ್ರ) ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1. ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.
2. ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು ಮತ್ತು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್ ಪಿ.ಡಿ.ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 692 ವೆಚ್ಚ–7/2009 ದಿನಾಂಕ: 10–09–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ, ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ ಮತ್ತು ಸೇವೆಗಳು)

ಪಿ.ಆರ್. 2791

**ವಿಷಯ:** ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಸಾ: ಜನವಾಡ ಗ್ರಾಮದ ಶ್ರೀ ಯಲ್ಲಮ್ಮ ದೇವಾಲಯ ಮತ್ತು ಗೋಕಾಕ್ ತಾಲ್ಲೂಕಿನ ಕೊಣ್ಣೂರು ಗ್ರಾಮದ ಶ್ರೀ ದುರ್ಗಾದೇವಿ ದೇವಾಲಯಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡುವ ಕುರಿತು.

**ಓದಲಾಗಿದೆ:** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆಯವರು ಪತ್ರ ಸಂಖ್ಯೆ: ಏಕರೂಪ ಶಾಸನ ಸಿಆರ್ 56/2008–09 ದಿನಾಂಕ: 05.08.2009

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ: 05.08.2009ರಲ್ಲಿ ಬೆಳಗಾವಿ ಜಿಲ್ಲೆ, ಅಥಣಿ ತಾಲೂಕಿನ ಸಾ:ಜನವಾಡ ಗ್ರಾಮದ ಶ್ರೀ ಯಲ್ಲಮ್ಮ ದೇವಾಲಯ ಮತ್ತು ಗೋಕಾಕ್ ತಾಲೂಕಿನ ಕೊಣ್ಣುರು ಗ್ರಾಮದ ಶ್ರೀ ದುರ್ಗಾದೇವಿ ದೇವಾಲಯಗಳನ್ನು ಅಧಿಸೂಚಿತ ಪಟ್ಟಿಯಲ್ಲಿ ಸೇರಿಸುವಂತೆ ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಬೆಳಗಾವಿ ಜಿಲ್ಲೆ, ಅಥಣಿ ತಾಲೂಕಿನ ಸಾ: ಜನವಾಡ ಗ್ರಾಮದ ಶ್ರೀ ಯಲ್ಲಮ್ಮ ದೇವಾಲಯ ಮತ್ತು ಗೋಕಾಕ್ ತಾಲ್ಲೂಕಿನ ಕೊಣ್ಣೂರು ಗ್ರಾಮದ ಶ್ರೀ ದುರ್ಗಾದೇವಿ ದೇವಾಲಯಗಳು ಹಿಂದಿನ ಬಿಪಿಟಿ ಕಾಯ್ದೆ 1950 ರನ್ವಯ ನೋಂದಣಿ ಆಗಿರುವುದರಿಂದ ಹಾಗೂ ನೂತನ ಕಾಯ್ದೆ ಜಾರಿಗೆ ಬಂದ ಹಿನ್ನೆಲೆಯಲ್ಲಿ ಈ 2 ದೇವಾಲಯಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸದೇ ಕೈಬಿಟ್ಟಿರುವುದರಿಂದ ಅಧಿಸೂಚಿತ ಪಟ್ಟಿಯಲ್ಲಿ ಸೇರಿಸಿ ಆದೇಶ ಹೊರಡಿಸುವಂತೆ ಸರ್ಕಾರಕ್ಕೆ ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 92 ಮುಆಬಿ 2009, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2009**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಸಾ:ಜನವಾಡ ಗ್ರಾಮದ ಶ್ರೀ ಯಲ್ಲಮ್ಮ ದೇವಾಲಯ ಮತ್ತು ಗೋಕಾಕ್ ತಾಲ್ಲೂಕಿನ ಕೊಣ್ಣೂರು ಗ್ರಾಮದ ಶ್ರೀ ದುರ್ಗಾದೇವಿ ದೇವಾಲಯಗಳನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997ರ ಸೆಕ್ಷನ್ 23ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2792

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ)

**ತಿದ್ದುಪಡಿ**

**ಸಂಖ್ಯೆ: ಕಂಇ 172 ಮುಸೇವಿ 2009, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2009**

ಸರ್ಕಾರದ ಆದೇಶ ಸಂಖ್ಯೆ ಕಂಇ 57 ಮುಸೇವಿ 2001 ದಿನಾಂಕ 10.03.2005ರ ಆದೇಶ ಅನುಬಂಧ–2ರ ಕ್ರಮಸಂಖ್ಯೆ 28ರ ಕಾಲಂ 5ರಲ್ಲಿರುವ **"ಜಿಲ್ಲಾಧಿಕಾರಿಗಳ ಕಚೇರಿ"** ಎಂಬುದನ್ನು **"ಸಹಾಯಕ ಆಯುಕ್ತರ ಕಚೇರಿ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2793

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಮುಜರಾಯಿ)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ತಿದ್ದೋಲೆ**

**ಸಂಖ್ಯೆ ಲಾ 125 ಎಲ್‌ಸಿಎಲ್ 09, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2009**

ಆದೇಶ ಸಂಖ್ಯೆ ಲಾ 125 ಎಲ್‌ಸಿಎಲ್ 2009 ದಿನಾಂಕ 07.11.2009ರ ಆದೇಶದ ಮೊದಲನೇ ಕಂಡಿಕೆಯ ಎರಡನೇ ಸಾಲಿನಲ್ಲಿ ನಮೂದಿಸಲಾಗಿರುವ "2008–09ನೇ ಸಾಲಿಗೆ" ಎಂಬುದರ ಬದಲಾಗಿ "2009–10ನೇ ಸಾಲಿಗೆ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲಾ ಹೆಚ್.ಆರ್.**

ಪಿ.ಆರ್. 2796

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಡಾ: ಎ.ರವೀಂದ್ರ, ಭಾ.ಆ.ಸೇ, ನಿವೃತ್ತ ಮುಖ್ಯ ಕಾರ್ಯದರ್ಶಿ ಹಾಗೂ ಮುಖ್ಯಮಂತ್ರಿಯವರ ಸಲಹೆಗಾರರು ಇವರಿಗೆ ವೇತನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 104 ಎಂಎಲ್‌ಆರ್ 2009, ದಿನಾಂಕ: 07.07.2009

2. ಸಿಆಸು ಇಲಾಖೆಯ ಆದೇಶ ಸಂಖ್ಯೆ: 41 ಶಿಸನೇ 2002, ದಿನಾಂಕ: 17.06.2002

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ: 07.07.2009ರಲ್ಲಿ ಡಾ.ಎ.ರವೀಂದ್ರ, ಭಾ.ಆ.ಸೇ ಕರ್ನಾಟಕ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿಗಳು ಇವರನ್ನು ಮಾನ್ಯ ಮುಖ್ಯಮಂತ್ರಿಯವರಿಗೆ ನಗರಾಭಿವೃದ್ಧಿ ಇಲಾಖೆ ವಿಷಯಗಳಿಗೆ ಸಲಹೆ ನೀಡಲು ಮಾನ್ಯ ಮುಖ್ಯಮಂತ್ರಿಗಳ ಸಲಹೆಗಾರರನ್ನಾಗಿ (Advisor to Chief Minister (Urban Affairs) ನೇಮಿಸಿ ಆದೇಶಿಸಲಾಗಿದೆ.

ಅದರಂತೆ ಮಾನ್ಯ ಮುಖ್ಯಮಂತ್ರಿಯವರ ಸಲಹೆಗಾರರಿಗೆ ವೇತನ ಮತ್ತು ಭತ್ಯೆ, ಮನೆ ಬಾಡಿಗೆ, ವಾಹನ ಸೌಕರ್ಯ, ಆಪ್ತ ಸಿಬ್ಬಂದಿ, ದೂರವಾಣಿ, ಪ್ರವಾಸ ಭತ್ಯೆ ಮತ್ತು ದಿನಭತ್ಯೆ ಮತ್ತು ಇತರೆ ಸೌಲಭ್ಯಗಳನ್ನು ಒದಗಿಸಲು ಮೇಲೆ ಓದಲಾದ ಕ್ರ.ಸಂ:2ರ ದಿನಾಂಕ: 17.6.2002ರಲ್ಲಿ ಆದೇಶಿಸಿರುವಂತೆ ಅದೇ ಪ್ರಕಾರವೇ ಎಲ್ಲಾ ಸೌಲಭ್ಯಗಳನ್ನು ಮಾನ್ಯ ಮುಖ್ಯಮಂತ್ರಿಗಳ ಸಲಹೆಗಾರರು ಮತ್ತು ಆಪ್ತ ಸಿಬ್ಬಂದಿಗೆ ಒದಗಿಸಲು ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 104 ಎಂಎಲ್‌ಆರ್ 2009 (ಭಾ), ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2009**

ಪ್ರಸ್ತಾವನೆಯಲ್ಲಿನ ಎಲ್ಲಾ ಅಂಶಗಳ ಬಗ್ಗೆ ಪರಿಶೀಲನೆಯ ತರುವಾಯ, ಸರ್ಕಾರವು ಸಚಿವರ ಸ್ಥಾನಮಾನವನ್ನು ಹೊಂದಿರುವ ಪ್ರಾಧಿಕಾರಗಳು ಈ ಕೆಳಕಂಡಂತೆ ಸೌಲಭ್ಯಗಳನ್ನು ಹೊಂದತಕ್ಕದೆಂದು ಆದೇಶಿಸಿದೆ.

1. ವೇತನ ಮತ್ತು ಭತ್ಯೆಗಳು: ಕಾರ್ಯಕಾರಿ ಆದೇಶದ ಮೇರೆಗೆ ಸಚಿವರ: ರಾಜ್ಯ ಸಚಿವರ ಸ್ಥಾನಮಾನ ನೀಡಿರುವ ಯಾವುದೇ ಪ್ರಾಧಿಕಾರವು 1956ರ ಕರ್ನಾಟಕ ಸಚಿವರುಗಳ ವೇತನ ಮತ್ತು ಭತ್ಯೆಗಳ ಅಧಿನಿಯಮ ಹಾಗೂ ಸಂಬಂಧಪಟ್ಟ ನಿಯಮಾವಳಿಯನ್ವಯ ವೇತನ ಭತ್ಯೆ ಇತ್ಯಾದಿಗಳನ್ನು ಪಡೆಯಲು ಅರ್ಹರಿರುತ್ತಾರೆ.
2. ಮನೆ ಬಾಡಿಗೆ: ಅಂತಹ ಪ್ರಾಧಿಕಾರವು ತಮ್ಮ ಅಧಿಕಾರಾವಧಿಯಲ್ಲಿ ಬೆಂಗಳೂರು ನಗರದಲ್ಲಿ ಒಂದು ಸುಸಜ್ಜಿತ ನಿವಾಸವನ್ನು ಹೊಂದಲು ಅಥವಾ ಸುಸಜ್ಜಿತ ನಿವಾಸದ ಬದಲಿಗೆ ಬೆಂಗಳೂರು ನಗರದಲ್ಲಿ ಮಾಸಿಕ ರೂ.15,000/ ಅಥವಾ ಇತರೆ ನಗರಗಳಲ್ಲಿ ಮಾಸಿಕ ರೂ.10,000/ ಮನೆ ಬಾಡಿಗೆ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಲೋಕೋಪಯೋಗಿ ಇಲಾಖೆಯ ಮೌಲ್ಯಮಾಪನಕ್ಕೆ ಒಳಪಟ್ಟು ಬೆಂಗಳೂರು ನಗರದಲ್ಲಿ ಮಾಸಿಕ ರೂ.30,000/– ಹಾಗೂ ಇತರೆ ನಗರಗಳಲ್ಲಿ ಮಾಸಿಕ ರೂ.15,000/– ಗರಿಷ್ಟ ಬಾಡಿಗೆಯನ್ನು ಪಡೆಯಬಹುದಾಗಿದೆ.
3. ವಾಹನ ಸೌಕರ್ಯ: ಪ್ರಾಧಿಕಾರವು ಚಾಲಕರ ಸಮೇತ ಒಂದು ಕಾಂಟೆಸ್ಸಾ ಕ್ಲಾಸಿಕ್: ಅಂಬಾಸಿಡರ್ ವಾಹನವನ್ನು ಹೊಂದಬಹುದಾಗಿದೆ. ವಾಹನದ ಮೇಲೆ ಕೆಂಪು ದೀಪವನ್ನು ಅಳವಡಿಸುವಂತಿಲ್ಲ. ಇವರು ಮುಖ್ಯ ಸ್ಥಾನದಲ್ಲಿ ಮಾಸಿಕ 300 ಲೀಟರ್‌ಗೆ ಸಮಾನವಾದ ಇಂಧನ ಮೊತ್ತವನ್ನು ವಾಹನ ಭತ್ಯೆಯನ್ನಾಗಿ ಪಡೆಯಲು ಅರ್ಹರಿರುತ್ತಾರೆ.
4. ಆಪ್ತ ಸಿಬ್ಬಂದಿ: ಈ ಪ್ರಾಧಿಕಾರಗಳು ಈ ಕೆಳಕಂಡಂತೆ ಆಪ್ತ ಸಿಬ್ಬಂದಿಯನ್ನು ಹೊಂದಬೇಕಾಗಿದೆ.

ಅ) ಆಪ್ತ ಕಾರ್ಯದರ್ಶಿ 1 ಹುದ್ದೆ

ಆ) 'ಸಿ' ವೃಂದ 2 ಹುದ್ದೆಗಳು

ಇ) 'ಡಿ' ವೃಂದ 2 ಹುದ್ದೆಗಳು

ಈ) ವಾಹನ ಚಾಲಕ 2 ಹುದ್ದೆ

ಈ ಹುದ್ದೆಗಳನ್ನು ನಿಯೋಜನೆ ಮೂಲಕ ತುಂಬತಕ್ಕದ್ದು, ಮಾನ್ಯ ಮುಖ್ಯಮಂತ್ರಿಯವರ ಸಲಹೆಗಾರರು ಇಚ್ಛಿಸುವ ವ್ಯಕ್ತಿಗಳನ್ನು ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಉದ್ದಿಮೆಗಳು ಅಥವಾ ಕೇಂದ್ರ ಸರ್ಕಾರ ಉದ್ದಿಮೆಗಳು ಅಥವಾ ಸ್ವಾಯುಕ್ತ ಸಂಸ್ಥೆಗಳು, ನಿಗಮ ಅಥವಾ ಸ್ಥಳೀಯ ಸಂಸ್ಥೆಗಳು ಇತ್ಯಾದಿಗಳಿಂದ ನಿಯೋಜನೆ ಮೂಲಕ ಪಡೆಯಬಹುದು. ಈ ನೇಮಕಾತಿಯು ಸಲಹೆಗಾರರ ಅವಧಿಯೊಂದಿಗೆ ಮುಕ್ತಾಯಗೊಳ್ಳಲಿದೆ.

ಕರ್ನಾಟಕ ರಾಜ್ಯ ಉದ್ದಿಮೆಗಳ ಮಹೋದ್ಯಮದ ಮಾರ್ಗಸೂಚಿಗಳು (ಸಲಹೆಗಾರರ ಆಪ್ತ ಸಿಬ್ಬಂಧಿಗಳನ್ನು ನೀಡುವ ಬಗ್ಗೆ) ಅನ್ವಯಿಸುವುದಿಲ್ಲ. ಹಾಗೂ ಮೇಲೆ ನಿಗದಿಪಡಿಸುವ ಸಿಬ್ಬಂದಿ ಮಾದರಿಯು ಅನ್ವಯಿಸುತ್ತದೆ.

5. ದೂರವಾಣಿ: ಸಲಹೆಗಾರರ ಅಧಿಕೃತ ಉಪಯೋಗಕ್ಕಾಗಿ ಒಂದು ನಿವಾಸ ದೂರವಾಣಿಯನ್ನು ಅವರ ಸ್ವಂತ ಗೃಹದಲ್ಲಿ ಅಥವಾ ಬಾಡಿಗೆ ಮೇಲೆ ಪಡೆದ ನಿವಾಸದಲ್ಲಿ ಒದಗಿಸತಕ್ಕದ್ದು.
6. ಪ್ರವಾಸ ಭತ್ಯೆ ಮತ್ತು ದಿನಭತ್ಯೆ: ಸಚಿವರುಗಳಿಗೆ ಅನ್ವಯಿಸುವ ಪ್ರವಾಸಭತ್ಯೆ ನಿಯಮಾವಳಿಯನ್ನು ಈ ಸಲಹೆಗಾರರಿಗೆ ವಿಸ್ತರಿಸಬಹುದಾಗಿದೆ. ರಾಜ್ಯದ ಹೊರಗಡೆ ಪ್ರವಾಸವು ಸೇರಿದಂತೆ ಮಾಸಿಕ ಪ್ರವಾಸದ ಅವಧಿಯ 10 ದಿನಗಳಿಗೆ ಮೀರತಕ್ಕದ್ದಲ್ಲ. ರಾಜ್ಯದ ಹೊರಗಡೆ ಪ್ರವಾಸವನ್ನು ಅವಶ್ಯವಿದ್ದಲ್ಲಿ ಮಾತ್ರ ಕೈಗೊಳ್ಳತಕ್ಕದ್ದು ಹಾಗೂ ತಿಂಗಳಲ್ಲಿ ಒಂದು ಬಾರಿಗಿಂತ ಹೆಚ್ಚಾಗಿ ಕೈಗೊಳ್ಳತಕ್ಕದ್ದಲ್ಲ.
7. ಇತರೆ, ಈ ಪ್ರಾಧಿಕಾರಿಗಳು ರಾಜ್ಯ ಹೊರಗಡೆ ರಾಜ್ಯ ಅತಿಥಿ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.

ಈ ವೆಚ್ಚವನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಲೆಕ್ಕ ಶೀರ್ಷಿಕೆ ಸೃಜಿಸಲು ಕಷ್ಟಸಾಧ್ಯವಾಗಿರುವುದರಿಂದ ಸಿ.ಆ.ಸು. ಇಲಾಖೆಯ ವ್ಯಾಪ್ತಿಗೆ ಬರುವ ಲೆಕ್ಕ ಶೀರ್ಷಿಕೆಯಡಿಯಲ್ಲಿ ಸಚಿವರುಗಳು ಹಾಗೂ ಸಚಿವರ ಸ್ಥಾನಮಾನ ಹೊಂದಿದ ಪ್ರಾಧಿಕಾರಿಗಳಿಗೆ ಸಿ.ಆ.ಸು. ಇಲಾಖೆಯ ಲೆಕ್ಕಪತ್ರ ಶಾಖೆಯ ಲೆಕ್ಕ ಶೀರ್ಷಿಕೆ (2013–00–108–0–00–041–ಪ್ರವಾಸ ಭತ್ಯೆ) ಮತ್ತು ಲೆಕ್ಕ ಶೀರ್ಷಿಕೆ (2013–00–101–0–00–001–ವೇತನ) ರಡಿ ವೆಚ್ಚ ಮಾಡಲು ಸಹಮತಿಸಿದೆ.

ಈ ಆದೇಶವನ್ನು ಸಿ.ಆ.ಸು. ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 78 ಶಿಸನೇ 2009, ದಿನಾಂಕ 21–11–2009 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 709 ವೆಚ್ಚ 9/2009, ದಿನಾಂಕ 12–11–2009ರಲ್ಲಿ ನೀಡಲಾದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2797

**ಸಿ.ಆರ್. ರವೀಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಬಿ.ರಮೇಶ್ ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಸೇವೆಯನ್ನು ಇಂಧನ ಇಲಾಖೆಯಲ್ಲಿ ಮುಂದುವರೆಸಿ ನಿಯೋಜನೆ ರದ್ದುಪಡಿಸಿರುವ ಹಾಗೂ ಸೇವೆಯಿಂದ ಅಮಾನತ್ತುಗೊಳಿಸಿರುವ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ವಾಕೈ 65 ಕೈಸೇವಿ 2009. ಬೆಂಗಳೂರು, ದಿ: 16.9.2009
2. ಸರ್ಕಾರದ ಆದೇಶ ಸಂಖ್ಯೆ: ವಾಕೈ 65 ಕೈಸೇವಿ 2009. ಬೆಂಗಳೂರು, ದಿ: 11.09.2009.
3. ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆರವರ ಅ.ಸ.ಪ. ಸಂಖ್ಯೆ: ಇ.ಎಸ್.205 ಎನ್.ಸಿ.ಇ 09, ದಿ:13.10.2009

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಬಿ.ರಮೇಶ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಆದೇಶವನ್ನು ಮಾನ್ಯ ಮಾಡದೇ KREDL, ಬೆಂಗಳೂರು ಇಲ್ಲಿ ನಿಯೋಜನೆ ಮೇರೆಗೆ ಕರ್ತವ್ಯಕ್ಕೆ ಹಾಜರಾಗಿರುವುದು ನಿಯಮ ಬಾಹಿರ. ಈ ಹಿನ್ನೆಲೆಯಲ್ಲಿ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ/ ಇಲಾಖಾ ವಿಚಾರಣೆ ಕಾಯ್ದಿರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಉಲ್ಲೇಖ (2)ರ ಆದೇಶದಲ್ಲಿ ಸದರಿಯವರ ನಿಯೋಜನೆಯನ್ನು ರದ್ದುಪಡಿಸಿ ಮಾತೃ ಇಲಾಖೆಗೆ ಹಿಂಪಡೆಯಲಾಗಿದ್ದಿತು.

ಮೇಲೆ ಓದಲಾದ (3)ರ ಅರೆ ಸರ್ಕಾರಿ ಪತ್ರದಲ್ಲಿ ಇಂಧನ ಇಲಾಖೆಯ ಸದರಿಯವರ ಮರು ಸ್ಥಳ ನಿಯುಕ್ತಿ ಆದೇಶ ಹೊರಡಿಸಿರುವುದರಿಂದ ಸದರಿಯವರ ಸೇವೆಯನ್ನು ಇಂಧನ ಇಲಾಖೆಯಲ್ಲೆ ಮುಂದುವರೆಸಿ ನಿಯೋಜನೆ ರದ್ದುಪಡಿಸುವ ಹಾಗೂ ಸೇವೆಯಿಂದ ಅಮಾನತ್ತುಗೊಳಿಸುವ ಆದೇಶವನ್ನು ಹಿಂಪಡೆಯಲು ಕೋರಲಾಗಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ವಿಷಯವನ್ನು ಪುನರ್ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 68 ಕೈಸೇವಿ 2009, ಬೆಂಗಳೂರು ದಿ: 8ನೇ ಡಿಸೆಂಬರ್ 2009**

ಶ್ರೀ ಬಿ.ರಮೇಶ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರನ್ನು ಅಮಾನತ್ತಿನಲ್ಲಿರಿಸಿ ಹೊರಡಿಸಿದ ಆದೇಶ ಸಂಖ್ಯೆ: ವಾಕೈ 65 ಕೈಸೇವಿ 09, ಬೆಂಗಳೂರು ದಿ:16.09.2009 ಕೂಡಲೇ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ ಹಾಗೂ ನಿಯೋಜನೆ ರದ್ದುಪಡಿಸಿರುವ ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 65 ಕೈಸೇವಿ 09, ಬೆಂಗಳೂರು ದಿ:11.09.2009ನ್ನು ಸಹ ಹಿಂಪಡೆಯಲಾಗಿದೆ ಹಾಗೂ ಶ್ರೀ ಬಿ.ರಮೇಶ್ ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರನ್ನು ನಿಯೋಜನೆ ಮೇರೆಗೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇಲ್ಲಿಯೇ ಮುಂದುವರೆಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಪ್ರಕಾಶ್**

ಪಿ.ಆರ್. 2799

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಆಸುಇ 61 ಪಿಎಫ್‌ಜಿ 2009, ಬೆಂಗಳೂರು, ದಿನಾಂಕ: 8/9ನೇ ಡಿಸೆಂಬರ್ 2009**

Karnataka Control of Organized Crime Act ಅಡಿಯಲ್ಲಿ ಖೊಟ್ಟಿ ದಾಖಲೆಗಳನ್ನು ಸಲ್ಲಿಸಿ ಸ್ವಾತಂತ್ರ್ಯ ಹೋರಾಟಗಾರರ ರಾಜ್ಯ ಗೌರವಧನ/ಕುಟುಂಬ ಗೌರವಧನವನ್ನು ಪಡೆಯುತ್ತಿರುವ ಅರ್ಜಿದಾರರ ಪ್ರಕರಣಗಳನ್ನು ತನಿಖೆ ಮಾಡಿ ಸರ್ಕಾರಕ್ಕೆ ವರದಿ ನೀಡಲು ಶ್ರೀ ಗೋಪಾಲಕೃಷ್ಣ ಬೇಕಲ್, ವಕೀಲರು (ನಿವೃತ್ತ ಪೊಲೀಸ್ ಉಪ–ಆಯುಕ್ತರು) ಇವರನ್ನು ಸಮಾಲೋಚಕರಾಗಿ ನೇಮಕ ಮಾಡಿ ಹೊರಡಿಸಿರುವ ಸಂಖ್ಯೆ: ಸಿಆಸುಇ 61 ಪಿಎಫ್‌ಜಿ 2009, ದಿನಾಂಕ: 19ನೇ ನವೆಂಬರ್ 2009ರ ಆದೇಶದ ಎರಡನೇ ಕಂಡಿಕೆಯಲ್ಲಿರುವ 'ಈ ಸಂಭಾವನೆ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2235-60-107-0-01-Freedom Fighters Honorarium Scheme-059-Subsidiary Expenses" ಅಡಿಯಲ್ಲಿ ಭರಿಸಲು ಆದೇಶಿಸಿದೆ ಎನ್ನುವುದರ ಬದಲಾಗಿ 'ಈ ಸಂಭಾವನೆ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2235-60-107-0-01-059-other Expenses" ಅಡಿಯಲ್ಲಿ ಭರಿಸಲು ಆದೇಶಿಸಿದೆ' ಎಂಬುದಾಗಿ ಓದಿಕೊಳ್ಳತಕ್ಕದ್ದು ಮತ್ತು ಶ್ರೀ ಗೋಪಾಲಕೃಷ್ಣ ಬೇಕಲ್ ಅವರಿಗೆ ಪಾವತಿಸಬೇಕಾದ ಸಂಭಾವನೆಯನ್ನು ಡ್ರಾ ಮಾಡಲು ಮತ್ತು ಪಾವತಿಸಲು ಜಿಲ್ಲಾಧಿಕಾರಿ, ಬೆಂಗಳೂರು (ನಗರ) ಜಿಲ್ಲೆ, ಇವರಿಗೆ ಅಧಿಕಾರ ನೀಡಲಾಗಿದೆ ಎಂಬುದಾಗಿ ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ಚಂದ್ರಶೇಖರರಾವ್**

ಪಿ.ಆರ್. 2800

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು–ರಾಜಕೀಯ ವಿಶ್ರಾಂತಿ ವೇತನ)